# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೫೧<br>**Volume 151** | ಬೆಂಗಳೂರು, ಗುರುವಾರ, ಮೇ ೧೨, ೨೦೧೬ (ವೈಶಾಖ ೨೨, ಶಕ ವರ್ಷ ೧೯೩೮)<br>**Bengaluru, Thursday, May 12, 2016 (Vaishakha 22, Shaka Varsha 1938)** | ಸಂಚಿಕೆ ೧೯<br>**Issue 19** |
|---|---|---|


## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ :** ಇಲಾಖಾ ಮುಂಬಡ್ತಿ ಸಮಿತಿಯನ್ನು ಪುನರ್ ರಚಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂ: ಲೋಇ 378 ಸೇಎಸು 2010, ದಿನಾಂಕ: 28.10.2011.
2. ಸುತ್ತೋಲೆ ಸಂ: ಸಿಆಸುಇ 142 ಸೆನೆನಿ 2011, ದಿನಾಂಕ: 28.09.2011.
3. ಸರ್ಕಾರದ ಆದೇಶ ಸಂ: ಲೋಇ 40 ಸೇಎಸು 2014, ದಿನಾಂಕ: 22.01.2014.
4. ಅಧಿಸೂಚನೆ ಸಂ: ಸಿಆಸುಇ 79 ಸೇಮುಇ 2015, ದಿನಾಂಕ: 22.09.2015.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಲೋಕೋಪಯೋಗಿ ಹಾಗೂ ಜಲಸಂಪನ್ಮೂಲ ಇಲಾಖೆಯ ವಿವಿಧ ವೃಂದಗಳ ಇಂಜಿನಿಯರುಗಳಿಗೆ ಸಂಬಂಧಿಸಿದಂತೆ ಪದೋನ್ನತಿ ನೀಡಲು ಇಲಾಖಾ ಪದೋನ್ನತಿ ಸಮಿತಿಯನ್ನು ರಚಿಸಿ ಆದೇಶಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಸುತ್ತೋಲೆಯಲ್ಲಿ ಗುಂಪು–ಎ ಹುದ್ದೆಗಳ ಮುಂಬಡ್ತಿಗೆ ಸಂಬಂಧಿಸಿದಂತೆ ಇಲಾಖಾ ಮುಂಬಡ್ತಿ ಸಮಿತಿಯಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿ: ಕಾರ್ಯದರ್ಶಿ ಹಾಗೂ ಇಲಾಖಾ ಮುಖ್ಯಸ್ಥರನ್ನು ಸದಸ್ಯರನ್ನಾಗಿ ಸೇರಿಸಲು ಅವಕಾಶವನ್ನು ಕಲ್ಪಿಸಲಾಗಿದೆ ಹಾಗೂ ಲೋಕೋಪಯೋಗಿ ಇಲಾಖೆ ಮತ್ತು ಜಲಸಂಪನ್ಮೂಲ ಇಲಾಖೆಯ ಸಮಿತಿಗಳಲ್ಲಿ ಮುಖ್ಯ ಅಭಿಯಂತರರು ಸೇರಿರತಕ್ಕದ್ದು ಎಂದು ತಿಳಿಸಲಾಗಿದೆ. ಅದರಂತೆ, ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ಆದೇಶದಲ್ಲಿ (1) ಸರ್ಕಾರದ ಕಾರ್ಯದರ್ಶಿಗಳು, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, (2) ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಹಾಗೂ (3) ಮುಖ್ಯ ಇಂಜಿನಿಯರ್, ಜಲಸಂಪನ್ಮೂಲ ಅಭಿವೃದ್ಧಿ ಸಂಸ್ಥೆ, ಬೆಂಗಳೂರು, ಇವರುಗಳನ್ನು ಇಲಾಖಾ ಮುಂಬಡ್ತಿ ಸಮಿತಿಯಲ್ಲಿ ಸದಸ್ಯರುಗಳನ್ನಾಗಿ ಸೇರಿಸಿ, ಸಮಿತಿಯನ್ನು ಪುನರ್ ರಚಿಸಿ ಆದೇಶಿಸಲಾಗಿದೆ.

ಕ್ರಮ ಸಂಖ್ಯೆ (3)ರ ಪುನರ್ ರಚನೆ ಸಮಿತಿಯಲ್ಲಿ ಶ್ರೀ ಓ.ಕೆ.ಸ್ವಾಮಿ (ಪರಿಶಿಷ್ಟ ಪಂಗಡ), ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ), ಧಾರವಾಡ ಇವರು ದಿನಾಂಕ: 30.09.2015ರಂದು ಸೇವೆಯಿಂದ ವಯೋ ನಿವೃತ್ತಿ ಹೊಂದಿರುತ್ತಾರೆ. ಮತ್ತು ಸಮಿತಿ–2ರಲ್ಲಿ ಸದಸ್ಯರಾಗಿರುವ ಶ್ರೀ ಡಿ. ಉದಯಶಂಕರ್ (ಪರಿಶಿಷ್ಟ ಜಾತಿ)ಅಧೀಕ್ಷಕ ಇಂಜಿನಿಯರ್ ಇವರು ಮುಖ್ಯ ಇಂಜಿನಿಯರ್ ಹುದ್ದೆಗೆ ಪದೋನ್ನತಿ ಹೊಂದಿ, ಲೋಕೋಪಯೋಗಿ ಇಲಾಖೆಯಿಂದ ವರ್ಗಾವಣೆ ಹೊಂದಿರುತ್ತಾರೆ. ಆದುದರಿಂದ, ಇಲಾಖಾ ಪದೋನ್ನತಿ ಸಮಿತಿ–1 ಮತ್ತು ಸಮಿತಿ–2 ರಲ್ಲಿ ಕ್ರಮವಾಗಿ ಪರಿಶಿಷ್ಟ ಪಂಗಡ ಮತ್ತು ಪರಿಶಿಷ್ಟ ಜಾತಿ ವರ್ಗದ ಅಧಿಕಾರಿಗಳ ವಯೋನಿವೃತ್ತಿ: ಪದೋನ್ನತಿಯಿಂದ ತೆರವಾಗಿರುವ ಸ್ಥಾನದಲ್ಲಿ ಅದೇ ಮೀಸಲಾತಿಯಡಿ ಅಧಿಕಾರಿಗಳನ್ನು ಇಲಾಖಾ ಪದೋನ್ನತಿ ಸಮಿತಿ ಸದಸ್ಯರನ್ನಾಗಿ ನೇಮಕ ಮಾಡಲು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಲೋಇ 279 ಸೇಎಸು 2015, ಬೆಂಗಳೂರು, ದಿನಾಂಕ: 04ನೇ ಡಿಸೆಂಬರ್, 2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಲೋಕೋಪಯೋಗಿ ಹಾಗೂ ಜಲಸಂಪನ್ಮೂಲ ಇಲಾಖೆಯ ವಿವಿಧ ವೃಂದಗಳ ಇಂಜಿನಿಯರುಗಳಿಗೆ ಸಂಬಂಧಿಸಿದಂತೆ ಪದೋನ್ನತಿ ನೀಡಲು ಇಲಾಖಾ ಪದೋನ್ನತಿ ಸಮಿತಿಯಲ್ಲಿ ಪರಿಶಿಷ್ಟ ಜಾತಿ: ಪರಿಶಿಷ್ಟ ಪಂಗಡದ ಈ ಕೆಳಕಂಡ ಅಧಿಕಾರಿಗಳನ್ನು ಸೇರಿಸಿ ಪುನರ್ ರಚಿಸಲಾಗಿದೆ.

**ಸಮಿತಿ–1**

**ಕಾರ್ಯಪಾಲಕ ಇಂಜಿನಿಯರ್ ವೃಂದದಿಂದ ಅಧೀಕ್ಷಕ ಇಂಜಿನಿಯರ್ ವೃಂದದ ಪದೋನ್ನತಿಗೆ ಅರ್ಹತೆಯನ್ನು ಪರಿಶೀಲಿಸಲು**

| | | |
|---|---|---|
| 1 | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ | **ಅಧ್ಯಕ್ಷರು** |
| 2 | ಸರ್ಕಾರದ ಕಾರ್ಯದರ್ಶಿ, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ | **ಸದಸ್ಯರು** |

| | | |
|---|---|---|
| 3 | ಸರ್ಕಾರದ ಪ್ರಧಾನ ಕಾರ್ಯದರ್ಶಿ: ಕಾರ್ಯದರ್ಶಿ, ಸಣ್ಣ ನೀರಾವರಿ ಇಲಾಖೆ | **ಸದಸ್ಯರು** |
| 4 | ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಇಲಾಖೆಯ ಪ್ರತಿನಿಧಿ | **ಸದಸ್ಯರು** |
| 5 | ಸರ್ಕಾರದ ಅಪರ: ಜಂಟಿ: ಉಪಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ (ಸೇವೆಗಳು) | **ಸದಸ್ಯರು** |
| 6 | ಶ್ರೀ ಜಿ.ಚಂದ್ರಮೌಳಿ ನಾಯಕ್ (ಪರಿಶಿಷ್ಠ ಪಂಗಡ), ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ), ಧಾರವಾಡ | **ಸದಸ್ಯರು** |
| 7 | ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು | **ಸದಸ್ಯರು** |
| 8 | ಮುಖ್ಯ ಇಂಜಿನಿಯರ್, ಜಲಸಂಪನ್ಮೂಲ ಅಭಿವೃದ್ಧಿ ಸಂಸ್ಥೆ, ಬೆಂಗಳೂರು | **ಸದಸ್ಯರು** |
| 9 | ಸರ್ಕಾರದ ಅಪರ: ಜಂಟಿ : ಉಪ ಕಾರ್ಯದರ್ಶಿ, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ (ಸೇವೆಗಳು) | **ಸದಸ್ಯ ಕಾರ್ಯದರ್ಶಿ** |

**ಸಮಿತಿ –2**

1) **ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ವಿಭಾಗ–1)ವೃಂದದಿಂದ ಕಾರ್ಯಪಾಲಕ ಇಂಜಿನಿಯರ್ ವೃಂದ**

2) **ಸಹಾಯಕ ಇಂಜಿನಿಯರ್ (ವಿಭಾಗ–1) ವೃಂದದಿಂದ ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ವಿಭಾಗ–1)ವೃಂದ**

3) **ಸಹಾಯಕ ಇಂಜಿನಿಯರ್ (ವಿಭಾಗ–2) ವೃಂದದಿಂದ ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ವಿಭಾಗ–2) ವೃಂದದ ಪದೋನ್ನತಿಗೆ ಅರ್ಹತೆಯನ್ನು ಪರಿಶೀಲಿಸಲು:–**

| | | |
|---|---|---|
| 1 | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ | **ಅಧ್ಯಕ್ಷರು** |
| 2 | ಸರ್ಕಾರದ ಕಾರ್ಯದರ್ಶಿ, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ | **ಸದಸ್ಯರು** |
| 3 | ಸರ್ಕಾರದ ಪ್ರಧಾನ ಕಾರ್ಯದರ್ಶಿ: ಕಾರ್ಯದರ್ಶಿ, ಸಣ್ಣ ನೀರಾವರಿ ಇಲಾಖೆ | **ಸದಸ್ಯರು** |
| 4 | ಸರ್ಕಾರದ ಅಪರ: ಜಂಟಿ: ಉಪಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ (ಸೇವೆಗಳು) | **ಸದಸ್ಯರು** |
| 5 | ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು | **ಸದಸ್ಯರು** |
| 6 | ಮುಖ್ಯ ಇಂಜಿನಿಯರ್, ಜಲಸಂಪನ್ಮೂಲ ಅಭಿವೃದ್ಧಿ ಸಂಸ್ಥೆ, ಬೆಂಗಳೂರು | **ಸದಸ್ಯರು** |
| 7 | ಶ್ರೀ ಎಸ್.ಸತ್ಯಾನಂದ (ಪರಿಶಿಷ್ಠ ಜಾತಿ), ಅಧೀಕ್ಷಕ ಇಂಜಿನಿಯರ್, ಲೋಕೋಪಯೋಗಿ ವೃತ್ತ, ಬೆಂಗಳೂರು | **ಸದಸ್ಯರು** |
| 8 | ಸರ್ಕಾರದ ಅಪರ: ಜಂಟಿ :ಉಪ ಕಾರ್ಯದರ್ಶಿ, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ (ಸೇವೆಗಳು) | **ಸದಸ್ಯ ಕಾರ್ಯದರ್ಶಿ** |

**PR. 145**
**SC. 200**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಮರಿಯಪ್ಪ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ. (ಸೇವೆಗಳು–ಎ).

## ಶಿಕ್ಷಣ ಸಚಿವಾಲಯ

**ವಿಷಯ:** ಶ್ರೀ ಚಂದ್ರಶೇಖರ ರಾಮಪ್ಪ ತೊರವಿ, ಹಿಂದಿನ ಉಪನಿರ್ದೇಶಕರು, ಪದವಿಪೂರ್ವ ಶಿಕ್ಷಣ ಇಲಾಖೆ, ಬೆಳಗಾವಿ ಇವರ ವಿರುದ್ಧ ದಾಖಲಾಗಿರುವ ಟ್ರ್ಯಾಪ್ ಪ್ರಕರಣದಲ್ಲಿ ಅಭಿಯೋಜನಾ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ:**

1. ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ (ಜಿ)/ಎಲ್–58/ಸಿಆರ್–02/2015/ಬಿಜಿಎಂ, ದಿನಾಂಕ: 26/12/2015.
2. ತನಿಖಾಧಿಕಾರಿಯವರ ಅಂತಿಮ ವರದಿ.
3. ತನಿಖಾ ದಾಖಲೆಗಳ ನಕಲುಗಳಾದ ಫಿರ್ಯಾದು, ಪ್ರಥಮ ವರ್ತಮಾನ ಪತ್ರ, ಪ್ರಾಯೋಗಿಕ ಪಂಚನಾಮೆ, ಫಲಕಾರಿಯಾಗದ ಟ್ರ್ಯಾಪ್ ಪಂಚನಾಮೆ, ಸ್ವತುಗಳ ಪಟ್ಟಿ, ಸಾಕ್ಷಿದಾರರ ಹೇಳಿಕೆಗಳು, ಲಂಚದ ಬೇಡಿಕೆಗೆ ಸಂಬಂಧಪಟ್ಟ ದಾಖಲೆಗಳು.

**ಪ್ರಸ್ತಾವನೆ:**

ಶ್ರೀ ಚಂದ್ರಶೇಖರ ರಾಮಪ್ಪ ತೊರವಿ, ಹಿಂದಿನ ಉಪನಿರ್ದೇಶಕರು, ಪದವಿಪೂರ್ವ ಶಿಕ್ಷಣ ಇಲಾಖೆ, ಬೆಳಗಾವಿ ಇವರ ವಿರುದ್ಧ ಲೋಕಾಯುಕ್ತ ಪೊಲೀಸ್ ಠಾಣೆ, ಬೆಳಗಾವಿ, ಇಲ್ಲಿ ದಾಖಲಾಗಿರುವ ಮೊಕದ್ದಮೆ ಸಂಖ್ಯೆ: 2/2015ಕ್ಕೆ ಸಂಬಂಧಿಸಿದಂತೆ, ಪೊಲೀಸ್ ಉಪಾಧೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಳಗಾವಿ ಇವರ ಅಂತಿಮ ತನಿಖಾ ವರದಿಯ ನಕಲು ಮತ್ತು ತನಿಖಾ ದಾಖಲಾತಿಗಳನ್ನು (ಮೇಲೆ ಓದಲಾದ–2, 3) ಅಪರ ಪೊಲೀಸ್ ಮಹಾ ನಿರ್ದೇಶಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರು ತಮ್ಮ ಪತ್ರ ದಿನಾಂಕ: 26/12/2015 (ಮೇಲೆ ಓದಲಾದ–1) ರೊಡನೆ ಕಳುಹಿಸುತ್ತಾ, ಆಪಾದಿತರನ್ನು ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಲಂಚ ನಿರೋಧಕ ಕಾಯ್ದೆ, 1988ರ ಕಲಂ 19(1)(ಬಿ)ರ ಅನ್ವಯ ಮಂಜೂರಾತಿಯನ್ನು ನೀಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಸಕ್ಷಮ ಪ್ರಾಧಿಕಾರಿಯಾದ ಸರ್ಕಾರವು ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಎಲ್–58/ಸಿಆರ್–02/2015/ಬಿಜಿಎಂ, ದಿನಾಂಕ: 26/12/2015ರೊಂದಿಗೆ ಕಳುಹಿಸಿಕೊಟ್ಟಿರುವ ಈ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಿದೆ.

1) ಫಿರ್ಯಾದಿ ಶ್ರೀ ಅಪ್ಪಸಾಹೇಬ ತಂದೆ ದೇವು ಹಿಂದಳಕರ, ನಿವೃತ್ತ ಪ್ರಾಂಶುಪಾಲರು, ಬೇಡಕಿಹಾಳ–ಶಮನೇವಾಡಿ ಸಂಯುಕ್ತ ಪದವಿ ಪೂರ್ವ ಮಹಾವಿದ್ಯಾಲಯ, ಬೇಡಕಿಹಾಳ, ಸಾ॥ ಭೋಜ, ಚಿಕ್ಕೋಡಿ ತಾ॥ ಇವರ ದೂರಿನ ದಿನಾಂಕ: 10/02/2015.

2) ಬೆಳಗಾವಿ ಲೋಕಾಯುಕ್ತ ಪೊಲೀಸ್ ಠಾಣೆ ಗುನ್ನೆ ಸಂಖ್ಯೆ: 02/2015 ಕಲಂ 7, 13 (1) (ಡಿ) ಸಹಕಲಂ 13(2) ಪಿಸಿ ಕಾಯ್ದೆ–1988 ಪ್ರಥಮ ವರ್ತಮಾನ ವರದಿ ದಿನಾಂಕ: 10/02/2015. ಹಾಗೂ ಮುಂದುವರೆದ ಲೋಕಾಯುಕ್ತ ರವರ ತನಿಖಾ ವರದಿಯಲ್ಲಿ ತಿಳಿಸಿರುವಂತೆ ಶ್ರೀ ಚಂದ್ರಶೇಖರ ರಾಮಪ್ಪ ತೊರವಿ, ಹಿಂದಿನ ಉಪನಿರ್ದೇಶಕರು, ಪದವಿಪೂರ್ವ ಶಿಕ್ಷಣ ಇಲಾಖೆ, ಬೆಳಗಾವಿ ಇವರು 1ನೇ ಆರೋಪಿಯಾಗಿರುತ್ತಾರೆ.

3) ಪ್ರಾಯೋಗಿಕ ಪಂಚನಾಮೆ (ಎಂಟ್ರಸ್ಟ್‌ಮೆಂಟ್ ಮಹಜರ್) ದಿನಾಂಕ: 10/02/2015.

4) ಜಪ್ತಿ ಪಂಚನಾಮೆ (ಟ್ರ್ಯಾಪ್ ಮಹಜರ್) ದಿನಾಂಕ: 10/02/2015.

5) ಸಹಾಯಕ ರಸಾಯನಿಕ ಪರೀಕ್ಷಕರು, ಸಾರ್ವಜನಿಕ ಆರೋಗ್ಯ ಸಂಸ್ಥೆ, ಶೇಷಾದ್ರಿ ರಸ್ತೆ, ಬೆಂಗಳೂರು ಇವರ ವರದಿ ಪತ್ರ ಸಂಖ್ಯೆ: ಸಾ.ಆ.ಸಂ/ರಾ.ಪ/ಲೋಕ್/102/2014–15, ದಿನಾಂಕ: 27/02/2015.

6) ಕೃತ್ಯ ನಡೆದ ಸ್ಥಳದ ನಕಾಶೆ.

**7) ಸಾಕ್ಷಿಗಳ ಹೇಳಿಕೆಗಳು:**

1) ಶ್ರೀ ಅಪ್ಪಾಸಾಹೇಬ ತಂದೆ ದೇವು ಹಿಂದಳಕರ, ನಿವೃತ್ತ ಪ್ರಾಂಶುಪಾಲರು, ಬೇಡಕಿಹಾಳ–ಶಮನೇವಾಡಿ ಸಂಯುಕ್ತ ಪದವಿ ಪೂರ್ವ ಮಹಾವಿದ್ಯಾಲಯ, ಬೇಡಕಿಹಾಳ, ಸಾ॥ ಭೋಜ, ಚಿಕ್ಕೋಡಿ ತಾ॥ (ಫಿರ್ಯಾಧಿದಾರರು).

2) ಶ್ರೀ ಸಂತೋಷ ಬಾಬು ಕಾಂಬಳೆ, ದ್ವಿತಿಯ ದರ್ಜೆ ಸಹಾಯಕ, ಸಾಮಾನ್ಯ ಆಡಳಿತ ಶಾಖೆ, ಮಹಾನಗರ ಪಾಲಿಕೆ, ಬೆಳಗಾವಿ ಸಾ॥ ಸುಳಗಾ (ಹಿಂಡಲಗಾ) ಬೆಳಗಾವಿ ತಾ॥ ಮತ್ತು ಜಿಲ್ಲೆ (ಪಂಚ–1).

3) ಶ್ರೀ ಗೌಸಲಾಲ ಇಮಾಮಸಾಬ ಮುಜಾವರ, ಉದ್ಯೋಗ: ಪ್ರಥಮ ದರ್ಜೆ ಸಹಾಯಕರು, ಬೆಳಗಾವಿ ನಗರಾಭಿವೃದ್ಧಿ ಪ್ರಾಧಿಕಾರ, ಬೆಳಗಾವಿ, ವಾಸ: ಮನೆ ನಂ: 574/1, ಕುರಬರ ಗಲ್ಲಿ, ಅನಗೋಳ, ಬೆಳಗಾವಿ (ಪಂಚ–2).

4) ಶ್ರೀ ಟಿ.ಎಮ್. ಬಸವಯ್ಯ, ಕಛೇರಿ ಅಧೀಕ್ಷಕರು, ಉಪನಿರ್ದೇಶಕರ ಕಛೇರಿ, ಪದವಿ ಪೂರ್ವ ಶಿಕ್ಷಣ ಇಲಾಖೆ, ಬೆಳಗಾವಿ.

5) ಶ್ರೀ ಭೀಮರಾವ ತವನಪ್ಪಾ ಗೊಂಗಡಿ, ಪ್ರ.ದ.ಸ ಉಪನಿರ್ದೇಶಕರ ಕಛೇರಿ, ಪದವಿ ಪೂರ್ವ ಶಿಕ್ಷಣ ಇಲಾಖೆ, ಬೆಳಗಾವಿ.

6) ಶ್ರೀ ಕೃಷ್ಣಾ ಗಂಗಾರಾಮ ಶಿಂಧೆ.

7) ಶ್ರೀ ಸಂದೀಪ ಅಪ್ಪಾಸಾಹೇಬ ಹಿಂದಳಕರ.

8) ಶ್ರೀ ಎಮ್.ಎಸ್. ಕಾವಳೇಕರ, ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು, ಲೋಕೋಪಯೋಗಿ, ಬಂದರು ಮತ್ತು ಒ.ಜ.ಸಾ. ಇಲಾಖೆ, ಉಪ ವಿಭಾಗ–1 ಬೆಳಗಾವಿ.

9) ಶ್ರೀ ಆರ್. ಜಿ.ಪಾಟೀಲ, ಸಿ.ಎಚ್.ಸಿ ಲೋಕಾಯುಕ್ತ ಪೊಲೀಸ್ ಠಾಣೆ ಬೆಳಗಾವಿ.

10) ಶ್ರೀ ಕೆ.ಎ. ದಾಂಡಿಗೆ, ಸಿ.ಎಚ್.ಸಿ ಲೋಕಾಯುಕ್ತ ಪೊಲೀಸ್ ಠಾಣೆ ಬೆಳಗಾವಿ.

11) ಶ್ರೀ ಡಿ.ಕೆ.ಪಾಟೀಲ, ಸಿ.ಎಚ್.ಸಿ ಲೋಕಾಯುಕ್ತ ಪೊಲೀಸ್ ಠಾಣೆ ಬೆಳಗಾವಿ.

12) ಶ್ರೀ ಎಮ್.ಎಸ್. ಬಡಿಗೇರ, ಸಿ.ಪಿ.ಸಿ. ಲೋಕಾಯುಕ್ತ ಪೊಲೀಸ್ ಠಾಣೆ ಬೆಳಗಾವಿ.

13) ಶ್ರೀ ಬ.ಸಿ. ಗೌಡರ ಸಿ.ಪಿ.ಸಿ ಲೋಕಾಯುಕ್ತ ಪೊಲೀಸ್ ಠಾಣೆ ಬೆಳಗಾವಿ.

14) ಶ್ರೀ ವಿ.ಎಸ್. ಬಿರಾಜನವರ ಸಿ.ಪಿ.ಸಿ.ಲೋಕಾಯುಕ್ತ ಪೊಲೀಸ್ ಠಾಣೆ ಬೆಳಗಾವಿ.

15) ಶ್ರೀ ಎ.ಆರ್. ಗುರನಗೌಡ್ರ ಸಿ.ಪಿ.ಸಿ. ಲೋಕಾಯುಕ್ತ ಪೊಲೀಸ್ ಠಾಣೆ ಬೆಳಗಾವಿ.

7) **ಲಂಚ ಕೇಳಲು ಆಧಾರವಾದ ಕಡತ:**–ಶ್ರೀ ಅಪ್ಪಾಸಾಹೇಬ ತಂದೆ ದೇವು ಹಿಂದಳಕರ, ಇವರು ಬೇಡಕಿಹಾಳ–ಶಮನೇವಾಡಿ ಸಂಯುಕ್ತ ಪದವಿ ಪೂರ್ವ ಮಹಾವಿದ್ಯಾಲಯ, ಬೇಡಕಿಹಾಳ, ಇಲ್ಲಿ ಕರ್ತವ್ಯ ನಿರ್ವಹಿಸಿ, ದಿನಾಂಕ: 31/05/2014 ರಂದು ನಿವೃತ್ತಿ ಹೊಂದಿದ್ದು, ಸದರಿಯವರ ಖಾತೆಯಲ್ಲಿದ್ದ ಗಳಿಕೆ ರಜೆ, ನಗದೀಕರಣ, ಡಿ.ಎ, ಹೆಚ್.ಆರ್.ಎ ಮತ್ತು ಸಿ.ಸಿ.ಎ ವ್ಯತ್ಯಾಸದ ಬಾಕಿ ಹಣ ಬಿಲ್ಲನ್ನು ಮಂಜೂರು ಮಾಡುವ ಸಲುವಾಗಿ ಕಾಲೇಜಿನ ಈಗಿನ ಪ್ರಾಂಶುಪಾಲರು ಅಗತ್ಯ ದಾಖಲೆಗಳೊಂದಿಗೆ ಸಂಬಂಧಿಸಿದ ಉಪನಿರ್ದೇಶಕರು, ಪದವಿಪೂರ್ವ ಶಿಕ್ಷಣ ಇಲಾಖೆ, ಬೆಳಗಾವಿ ಇವರಿಗೆ ಪತ್ರ ಬರೆದಿದ್ದು, ಅದು ದಿ: 06/01/2015ರಂದು ಸ್ವೀಕೃತವಾಗಿರುತ್ತದೆ. ಈ ಬಿಲ್ಲನ್ನು ಮಂಜೂರು ಮಾಡುವ ಸಂಬಂಧ ಉಪನಿರ್ದೇಶಕರನ್ನು ಭೇಟಿ ಮಾಡಲಾಗಿ, ಸದರಿಯವರು ಸರಿಯಾಗಿ ಸ್ಪಂದಿಸದೇ ವಿಳಂಬ ಮಾಡಿರುತ್ತಾರೆ. ದಿನಾಂಕ: 04/02/2015ರಂದು ಫಿರ್ಯಾದುದಾರರು ಮತ್ತು ಅವರ ಮಗ ಒಟ್ಟಾಗಿ ಉಪನಿರ್ದೇಶಕರ ಕಛೇರಿಯ ವಿಷಯ ನಿರ್ವಾಹಕರನ್ನು ಭೇಟಿಯಾಗಿ ವಿಚಾರಿಸಿದಾಗ ಮೊದಲು ಉಪನಿರ್ದೇಶಕರನ್ನು ಭೇಟಿ ಮಾಡುವಂತೆ ತಿಳಿಸಿರುತ್ತಾರೆ. ಅದರಂತೆ ಉಪನಿರ್ದೇಶಕರನ್ನು ಭೇಟಿ ಮಾಡಲಾಗಿ ಅವರು ವಿಷಯ ನಿರ್ವಾಹಕರನ್ನು ಭೇಟಿ ಆಗುವಂತೆಯೂ, ವಿಷಯ ನಿರ್ವಾಹಕರಿಗೆ ಹೇಳುವುದಾಗಿಯೂ ತಿಳಿಸಿರುತ್ತಾರೆ. ಉಪನಿರ್ದೇಶಕರು ತಿಳಿಸಿದಂತೆ ವಿಷಯ ನಿರ್ವಾಹಕರನ್ನು ಭೇಟಿಯಾದಾಗ ಸದರಿಯವರು ಲಂಚದ ಬಗ್ಗೆ ಪ್ರಸ್ತಾಪಿಸಿದ್ದು, ಶ್ರೀ ಅಪ್ಪಾಸಾಹೇಬ ತಂದೆ ದೇವು ಹಿಂದಳಕರ, ಇವರು ಲಂಚದ ಹಣವನ್ನು ಕೊಟ್ಟು ಕೆಲಸವನ್ನು ಮಾಡಿಸಿಕೊಳ್ಳಲು ಇಷ್ಟವಿಲ್ಲದ ಕಾರಣ ದಿನಾಂಕ: 10/02/2015ರಂದು ಬೆಳಗಾವಿ ಲೋಕಾಯುಕ್ತ ಕಛೇರಿಗೆ ಬಂದು ಲಿಖಿತ ದೂರನ್ನು ಸಲ್ಲಿಸಿರುತ್ತಾರೆ.

8) **ಆಪಾದಿತ ಅಧಿಕಾರಿ ಶ್ರೀ ಚಂದ್ರಶೇಖರ ರಾಮಪ್ಪ ತೊರವಿ, ಹಿಂದಿನ ಉಪನಿರ್ದೇಶಕರು, ಪದವಿಪೂರ್ವ ಶಿಕ್ಷಣ ಇಲಾಖೆ, ಬೆಳಗಾವಿ ಇವರ ದಿನಾಂಕ: 10/02/2015ರ ಸಮಜಾಯಿಷಿ ಹೇಳಿಕೆ ಈ ಕೆಳಕಂಡಂತೆ ಇದೆ.**

"ಶ್ರೀ ಅಪ್ಪಾಸಾಹೇಬ ತಂದೆ ದೇವು ಹಿಂದಳಕರ, ನಿವೃತ್ತ ಪ್ರಾಂಶುಪಾಲರು, ಬಿ.ಎಸ್. ಸಂಯುಕ್ತ ಪದವಿ ಪೂರ್ವ ಕಾಲೇಜು, ಬೇಡಕಿಹಾಳ, ಚಿಕ್ಕೋಡಿ ತಾ॥ ಇವರ ನಿವೃತ್ತಿ ಅನುದಾನದ ಬಿಲ್‌ನ್ನು ಮಂಜೂರು ಮಾಡಿ ಜಿಲ್ಲಾ ಖಜಾನೆಗೆ ಸಲ್ಲಿಸಲಾಗಿದೆ. ಇವರಿಗೆ ಹಣ ಕೊಡಲು ಯಾವುದೇ ಬೇಡಿಕೆಯನ್ನು ಇಟ್ಟಿರುವುದಿಲ್ಲ. ಅವರಿಂದ ಹಣ ತೆಗೆದುಕೊಳ್ಳಲು ನಾನು ಹೇಳಿರುವುದಿಲ್ಲ. ನಮ್ಮ ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ದ್ವಿತೀಯ ದರ್ಜೆ ಸಹಾಯಕ ಶ್ರೀ ಮಹಾಂತೇಶ ಮಲ್ಲಾಮರಡಿ ಇವರಿಗೆ ಬಿಲ್‌ನ್ನು ಖಜಾನೆಗೆ ಸಲ್ಲಿಸಿ ಅವರಿಗೆ (ಸಂಬಂಧಿಸಿದವರಿಗೆ) ಸಂದಾಯ ಮಾಡಲು ತಿಳಿಸಿದ್ದೇನೆ."

ತನಿಖಾಧಿಕಾರಿಗಳಾದ ಶ್ರೀ ಜೆ.ಎಂ. ಕರುಣಾಕರಶೆಟ್ಟಿ, ಪೊಲೀಸ್ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ ಪೊಲೀಸ್ ಠಾಣೆ, ಬೆಳಗಾವಿ ಇವರು ಶ್ರೀ ಚಂದ್ರಶೇಖರ ರಾಮಪ್ಪ ತೊರವಿ, ಹಿಂದಿನ ಉಪನಿರ್ದೇಶಕರು, ಪದವಿಪೂರ್ವ ಶಿಕ್ಷಣ ಇಲಾಖೆ, ಬೆಳಗಾವಿ ಹಾಗೂ ಶ್ರೀ ಮಹಾಂತೇಶ ರಾಚಪ್ಪ ಮಲ್ಲಾಮರಡಿ, ದ್ವಿತೀಯ ದರ್ಜೆ ಸಹಾಯಕರು, ಶ್ರೀ ಸಿದ್ಧರಾಮೇಶ್ವರ ಪದವಿ ಪೂರ್ವ ಕಾಲೇಜು (ನಿಯೋಜನೆ ಮೇಲೆ ಉಪನಿರ್ದೇಶಕರ ಕಛೇರಿ, ಪದವಿ ಪೂರ್ವ ಶಿಕ್ಷಣ ಇಲಾಖೆ ಬೆಳಗಾವಿ) ಇವರುಗಳ ವಿರುದ್ಧ ದಂಡಾರ್ಹ ಪ್ರಕರಣವನ್ನು ಕರ್ನಾಟಕ ಲೋಕಾಯುಕ್ತ ಬೆಳಗಾವಿ ಪೊಲೀಸ್ ಠಾಣೆಯಲ್ಲಿ ಮೊ.ಸಂಖ್ಯೆ: 02/2015 ಕಲಂ7, 13 (1) (ಡಿ) ಸಹಕಲಂ 13(2) ಲಂಚ ಪ್ರತಿಬಂಧಕ ಕಾಯ್ದೆ 1988ರ ಮತ್ತು ಕಲಂ 34 ಐಪಿಸಿ ಅಡಿಯಲ್ಲಿ ದಾಖಲಿಸಿರುತ್ತಾರೆ.

ಆಪಾದಿತರಾದ ಶ್ರೀ ಚಂದ್ರಶೇಖರ ರಾಮಪ್ಪ ತೊರವಿ, ಹಿಂದಿನ ಉಪನಿರ್ದೇಶಕರು, ಪದವಿಪೂರ್ವ ಶಿಕ್ಷಣ ಇಲಾಖೆ, ಬೆಳಗಾವಿ ಹಾಗೂ ಶ್ರೀ ಮಹಾಂತೇಶ ರಾಚಪ್ಪ ಮಲ್ಲಾಮರಡಿ, ದ್ವಿತೀಯ ದರ್ಜೆ ಸಹಾಯಕರು, ಶ್ರೀ ಸಿದ್ಧರಾಮೇಶ್ವರ ಪದವಿ ಪೂರ್ವ ಕಾಲೇಜು (ನಿಯೋಜನೆ ಮೇಲೆ ಉಪನಿರ್ದೇಶಕರ ಕಛೇರಿ, ಪದವಿ ಪೂರ್ವ ಶಿಕ್ಷಣ ಇಲಾಖೆ ಬೆಳಗಾವಿ) ಇವರುಗಳ ಶ್ರೀ ಅಪ್ಪಾಸಾಹೇಬ ತಂದೆ ದೇವು ಹಿಂದಳಕರ, ಬೇಡಕಿಹಾಳ–ಶಮನೇವಾಡಿ ಸಂಯುಕ್ತ ಪದವಿ ಪೂರ್ವ ಮಹಾವಿದ್ಯಾಲಯ, ಬೇಡಕಿಹಾಳ, ಇಲ್ಲಿ ಕರ್ತವ್ಯ ನಿರ್ವಹಿಸಿ, ದಿನಾಂಕ: 31/05/2014ರಂದು ನಿವೃತ್ತಿ ಹೊಂದಿದ್ದು, ಸದರಿಯವರ ಖಾತೆಯಲ್ಲಿದ್ದ ಗಳಿಕೆ ರಜೆ, ನಗದೀಕರಣ, ಡಿ.ಎ, ಹೆಚ್.ಆರ್.ಎ ಮತ್ತು ಸಿ.ಸಿ.ಎ ವ್ಯತ್ಯಾಸದ ಬಾಕಿ ಹಣ ಬಿಲ್ಲನ್ನು ಮಂಜೂರು ಮಾಡುವ ಸಲುವಾಗಿ ಆಪಾದಿತರು ಲಂಚದ ಹಣಕ್ಕೆ ಬೇಡಿಕೆ ಇಟ್ಟಿರುವ ಸಂಭಾಷಣೆಯ ಕ್ಲಿಪಿಂಗ್‌ನ್ನು ಮೊಬೈಲ್ ನಿಂದ ಡಿ.ವಿ.ಡಿಗೆ ಡೌನ್‌ಲೋಡ್ ಮಾಡಿಕೊಂಡು ದಿ: 04/06/2015ರಂದು ಪಂಚಸಾಕ್ಷಿಗಳ ಸಮಕ್ಷಮದಲ್ಲಿ ಪ್ಲೇ ಮಾಡಿ ಕೇಳಿಸಿದಾಗ ಆಪಾದಿತರ ಧ್ವನಿ ಪರಿಚಯವಿರುವ ಶ್ರೀ ಟಿ.ಎಮ್ ಬಸವಯ್ಯ, ಕಛೇರಿ ಅಧೀಕ್ಷಕರು, ಉಪ ನಿರ್ದೇಶಕರ ಕಛೇರಿ, ಪದವಿ ಪೂರ್ವ ಶಿಕ್ಷಣ ಇಲಾಖೆ, ಬೆಳಗಾವಿ ಮತ್ತು ಶ್ರೀ ಭೀಮರಾವ ತವನಪ್ಪಾ ಗೊಂಗಡಿ, ಪ್ರ.ದ.ಸ ಉಪನಿರ್ದೇಶಕರ ಕಛೇರಿ, ಪದವಿ ಪೂರ್ವ ಶಿಕ್ಷಣ ಇಲಾಖೆ, ಬೆಳಗಾವಿ ಇವರು ಆಪಾದಿತರ ಧ್ವನಿಗಳನ್ನು ಗುರುತಿಸಿರುತ್ತಾರೆ.

ಈ ಎಲ್ಲಾ ಕಾರಣಗಳಿಂದ ಆಪಾದಿತರು ಲಂಚ ನಿರೋಧಕ ಕಾಯ್ದೆ 1988 ಕಲಂ7, 13 (1) (ಡಿ) ಸಹಕಲಂ 13(2) ಮತ್ತು ಕಲಂ 34 ಐಪಿಸಿ ಅಡಿಯಲ್ಲಿ ಶಿಕ್ಷಾರ್ಹ ಅಪರಾಧವನ್ನು ಎಸಗಿರುವುದು ಮೇಲ್ನೋಟಕ್ಕೆ ಮನವರಿಕೆಯಾಗಿದೆ. ಆದ್ದರಿಂದ ಇವರನ್ನು ಲಂಚ ನಿರೋಧಕ ಕಾಯ್ದೆ, 1988ರ ಕಲಂ–19(1)(ಬಿ)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸುವುದು ಅವಶ್ಯ ಎಂದು ಸರ್ಕಾರ ಮನಗಂಡು ಆಪಾದಿತರನ್ನು ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಸರ್ಕಾರದ ಮಂಜೂರಾತಿ ನೀಡಲು ತೀರ್ಮಾನಿಸಿದೆ. ಆದುದರಿಂದ ಈ ಕೆಳಕಂಡಂತೆ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 61 ಡಿಜಿಡಿ 2015, ಬೆಂಗಳೂರು, ದಿನಾಂಕ: 21ನೇ ಜನವರಿ, 2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಸರ್ಕಾರವು ಆರೋಪಿಯಾದ ಶ್ರೀ ಚಂದ್ರಶೇಖರ ರಾಮಪ್ಪ ತೊರವಿ, ಹಿಂದಿನ ಉಪನಿರ್ದೇಶಕರು, ಪದವಿಪೂರ್ವ ಶಿಕ್ಷಣ ಇಲಾಖೆ, ಬೆಳಗಾವಿ ಇವರ ವಿರುದ್ಧ ಲಂಚ ನಿರೋಧಕ ಕಾಯ್ದೆ 1988ರ ಕಲಂ7, 13 (1) (ಡಿ) ಸಹಕಲಂ 13(2) ಮತ್ತು ಕಲಂ 34 ಐಪಿಸಿ ಅಡಿಯಲ್ಲಿ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಗಗೊಳಿಸಲು ಸರ್ಕಾರ ಮಂಜೂರಾತಿಯನ್ನು ನೀಡಿ ಆದೇಶಿಸಿದೆ.

ಮುಂದುವರೆದು, ಕರ್ನಾಟಕ ಸರ್ಕಾರದ (ವ್ಯವಹಾರ) ನಿಯಮಾವಳಿ 1977ರ ನಿಯಮ 18ರ ಪ್ರಕಾರ ಸರ್ಕಾರದ ಪರವಾಗಿ ಅಥವಾ ಸರ್ಕಾರದಿಂದ ಹೊರಡಿಸಲಾಗುವ ಎಲ್ಲಾ ಆದೇಶಗಳನ್ನು ಅಥವಾ ಅಧಿಸೂಚನೆಗಳನ್ನು ಕರ್ನಾಟಕ ಸರ್ಕಾರದ ರಾಜ್ಯಪಾಲರ ಹೆಸರಿನಲ್ಲಿ ಹೊರಡಿಸಬೇಕಿರುತ್ತದೆ.

ಸದರಿ ನಿಯಮಾವಳಿಯ ನಿಯಮ–19(1)(ಬಿ)ರ ಪ್ರಕಾರ ಕರ್ನಾಟಕ ಸರ್ಕಾರದ ರಾಜ್ಯಪಾಲರ ಹೆಸರಿನಲ್ಲಿ ಹೊರಡಿಸಿರುವ ಆದೇಶಗಳು ಮತ್ತು ಅಧಿಸೂಚನೆಗಳು ಒಬ್ಬ ಅಧೀನ ಕಾರ್ಯದರ್ಶಿಯ ಸಹಿಯಿಂದ ಅಧಿಕೃತಗೊಳ್ಳಬೇಕು ಹಾಗೂ ಅಂತಹ ಸಹಿಯು ಅಂತಹ ಆದೇಶ ಅಥವಾ ಲೇಖನವನ್ನು ಸರಿಯಾಗಿ ಅಧಿಕೃತಗೊಳಿಸುತ್ತದೆ.

ಆದ್ದರಿಂದ ಕರ್ನಾಟಕ ಸರ್ಕಾರದ (ವ್ಯವಹಾರ) ನಿಯಮಾವಳಿಗಳು 1977ರ ಈ ಮೇಲ್ಕಂಡ ಆದೇಶವನ್ನು ಸರ್ಕಾರದ ಪರವಾಗಿ ಕಛೇರಿಯ ಮೊಹರು ಮತ್ತು ಸರ್ಕಾರದ ಅಧೀನ ಕಾರ್ಯದರ್ಶಿಯ ಸಹಿಯ ಅಡಿಯಲ್ಲಿ ದಿನಾಂಕ: 21/01/2016 ರಂದು ಹೊರಡಿಸಲಾಗಿದೆ.

**PR. 103**

**SC. 250**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ರಾಮಕೃಷ್ಣಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ಪದವಿ ಪೂರ್ವ)

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಎತ್ತಿನಹೊಳೆ ಸಮಗ್ರ ಕುಡಿಯುವ ನೀರಿನ ಯೋಜನೆಗೆ ಸಂಬಂಧಿಸಿದಂತೆ ಭೂಸ್ವಾಧೀನ ಪ್ರಕ್ರಿಯೆಗಾಗಿ ತ್ವರಿತ ಸಾಮಾಜಿಕ ಪರಿಣಾಮಗಳ ನಿರ್ಧರಣಾ ಪ್ರಕ್ರಿಯೆಯನ್ನು ಕೈಗೊಳ್ಳುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ: ಜಸಂಇ 203 ವಿಬ್ಯಾಇ 2012, ದಿನಾಂಕ: 13.07.2012.
2. ಸರ್ಕಾರದ ಆದೇಶ ಸಂಖ್ಯೆ ಜಸಂಇ 203 ವಿಬ್ಯಾಇ 2012, ದಿನಾಂಕ: 17.02.2014.
3. ಪರಿಸರ ಮತ್ತು ಅರಣ್ಯ ಮಂತ್ರಾಲಯ, ಕೇಂದ್ರ ಸರ್ಕಾರದ ಪತ್ರ ಸಂಖ್ಯೆ:J-12011/ 46/2012-IA-I, ದಿನಾಂಕ: 28.03.2013.
4. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನೀರಾವರಿ ನಿಗಮ ನಿಯಮಿತ, ಬೆಂಗಳೂರು ರವರ ಪತ್ರ ಸಂಖ್ಯೆ: ಕನೀನಿನಿ:ಕೇಕ:875 ಎಎಲ್‌ಎ 2014–15:6422: ದಿನಾಂಕ: 09.02.2015.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ, ಕೋಲಾರ, ಚಿಕ್ಕಬಳ್ಳಾಪುರ, ಬೆಂಗಳೂರು ಗ್ರಾಮಾಂತರ, ರಾಮನಗರ ಜಿಲ್ಲೆಗಳಲ್ಲಿ ಮತ್ತು ತುಮಕೂರು, ಚಿಕ್ಕಮಗಳೂರು, ಹಾಸನ ಜಿಲ್ಲೆಗಳ ಆಯ್ದ ತಾಲ್ಲೂಕುಗಳಲ್ಲಿನ ಜನರಿಗೆ ಕುಡಿಯುವ ನೀರನ್ನು ಶೀಘ್ರವಾಗಿ ಒದಗಿಸುವ ದೃಷ್ಟಿಯಿಂದ ಪಶ್ಚಿಮಘಟ್ಟದ ಮೇಲ್ಭಾಗದ ಹಳ್ಳಗಳ/ನದಿಗಳ ಪ್ರವಾಹದ ಸುಮಾರು 24.01 ಟಿಎಂಸಿ ನೀರನ್ನು ಮೇಲೆ ಹೇಳಿದ ಭಾಗದ ಪ್ರದೇಶಗಳಿಗೆ ಪೂರೈಸಲು ನಿರ್ಧರಿಸಿ ಎತ್ತಿನಹೊಳೆ ಯೋಜನೆಯ ₹. 8323.50 ಕೋಟಿಗಳ ಮೊತ್ತದ ವಿವರವಾದ ಯೋಜನಾ ವರದಿಗೆ ಆಡಳಿತಾತ್ಮಕ ಅನುಮೋದನೆ ನೀಡಲಾಗಿರುತ್ತದೆ.

ಮೇಲೆ ಓದಲಾದ (2)ರ ಸರ್ಕಾರದ ಆದೇಶದಲ್ಲಿ, ಎತ್ತಿನಹೊಳೆ ಯೋಜನೆಯ ₹.12,912.36 ಕೋಟಿಗಳ ಮೊತ್ತದ ಪರಿಷ್ಕೃತ ವಿವರವಾದ ಯೋಜನಾ ವರದಿಗೆ ಆಡಳಿತಾತ್ಮಕ ಅನುಮೋದನೆಯನ್ನು ನೀಡಲಾಗಿರುತ್ತದೆ.

ಮಾನ್ಯ ಜಲ ಸಂಪನ್ಮೂಲ ಸಚಿವರ ಅಧ್ಯಕ್ಷತೆಯಲ್ಲಿ ಎತ್ತಿನಹೊಳೆ ಯೋಜನೆ ಕುರಿತಂತೆ ದಿನಾಂಕ: 29.05.2014ರಂದು ನಡೆದ ಸಭೆಯಲ್ಲಿ ಎತ್ತಿನಹೊಳೆ ಯೋಜನೆಯನ್ನು ಇನ್ನು ಮುಂದೆ ಎತ್ತಿನಹೊಳೆ ಸಮಗ್ರ ಕುಡಿಯುವ ನೀರಿನ ಯೋಜನೆ ಎಂದು ಪುನರ್ ನಾಮಕರಣ ಮಾಡಲು ನಿರ್ಧರಿಸಿದೆ.

ಪರಿಸರ ಮತ್ತು ಅರಣ್ಯ ಮಂತ್ರಾಲಯ, ಕೇಂದ್ರ ಸರ್ಕಾರದ ಮೇಲೆ ಓದಲಾದ (3)ರ ಪತ್ರದಲ್ಲಿ ಎತ್ತಿನಹೊಳೆ ಸಮಗ್ರ ಕುಡಿಯುವ ನೀರಿನ ಯೋಜನೆಗೆ Environmental Impact Assessement (EIA) ತೀರುವಳಿ ಕುರಿತು, ಈ ಯೋಜನೆಯು ಕುಡಿಯುವ ನೀರಿನ ತೀವ್ರ ಅಭಾವವಿರುವ ಪ್ರದೇಶಗಳಿಗೆ ಕುಡಿಯುವ ನೀರು ಒದಗಿಸುವ ಯೋಜನೆಯಾಗಿರುವುದರಿಂದ EIA Notification 2006 (2009 ತಿದ್ದುಪಡಿಯಂತೆ) ಅನ್ವಯವಾಗುವುದಿಲ್ಲವೆಂದು ತಿಳಿಸಿ, ಅಗತ್ಯವಿದ್ದಲ್ಲಿ, ಪರಿಸರ ನಿರ್ವಹಣಾ ಯೋಜನೆ (Environment Management Plan) ಮಾಡುವುದು ಹಾಗೂ ಅಗತ್ಯವಿರುವ ಅರಣ್ಯ ಪ್ರದೇಶಕ್ಕೆ ಸಂಬಂಧಿಸಿದಂತೆ, ಸೂಕ್ತ ತೀರುವಳಿ ಪಡೆಯುವಂತೆ ಸೂಚಿಸಿರುತ್ತದೆ.

ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನೀರಾವರಿ ನಿಗಮ ನಿಯಮಿತ, ಇವರ ಮೇಲೆ ಓದಲಾದ (4)ರ ಪತ್ರ ದಿನಾಂಕ: 09.02.2015ರಲ್ಲಿ ಎತ್ತಿನಹೊಳೆ ಸಮಗ್ರ ಕುಡಿಯುವ ನೀರಿನ ಯೋಜನೆಗೆ ಭೂಸ್ವಾಧೀನ ಪ್ರಕ್ರಿಯೆ ಸಂಬಂಧ ಸಾಮಾಜಿಕ ಪರಿಣಾಮಗಳ ನಿರ್ಧರಣಾ ಪ್ರಕ್ರಿಯೆಯಿಂದ ವಿನಾಯಿತಿ ನೀಡುವ ಕುರಿತಂತೆ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಆದರೆ The Right to Fair Compensation and Transparency in Land Acquisition, Rehabilitation and Resettlement Act 2013ರ Chapter-IIರ ಸೆಕ್ಷನ್ 4(1)ರ ಪ್ರಕಾರ ಸರ್ಕಾರವು ಸಾರ್ವಜನಿಕ ಉದ್ದೇಶಕ್ಕಾಗಿ ಭೂಸ್ವಾಧೀನ ಪಡೆಯಲು ಉದ್ದೇಶಿಸಿದ್ದಲ್ಲಿ, ಅಂತಹ ಯೋಜನೆಗಳಿಂದ ಆಗುವ ಸಾಮಾಜಿಕ ಪರಿಣಾಮ ನಿರ್ಧರಣೆ (Social Impact Assessment) ಯನ್ನು ಮಾಡಿಸಬೇಕಾಗಿರುತ್ತದೆ. ಆದರೆ, ಸೆಕ್ಷನ್ 6(2)ರ ಪ್ರಾವಿಸೋ ಪ್ರಕಾರ ನೀರಾವರಿ ಯೋಜನೆಗಳಿಗೆ ಯಾವುದೇ ಇತರೆ ಕಾಯ್ದೆಯಡಿಯಲ್ಲಿ ಪರಿಸರ ಪರಿಣಾಮ ನಿರ್ಧರಣೆ (EIA) ಮಾಡಿಸಬೇಕಾಗಿದ್ದಲ್ಲಿ ಸಾಮಾಜಿಕ ಪರಿಣಾಮದ ನಿರ್ಧರಣೆ ಮಾಡುವ ಅವಶ್ಯಕತೆ ಇರುವುದಿಲ್ಲ. ಆದರೆ, ಎತ್ತಿನಹೊಳೆ ಯೋಜನೆಯು ಸಮಗ್ರ ಕುಡಿಯುವ ನೀರಿನ ಯೋಜನೆ ಆಗಿರುವ ಕಾರಣ ಸದರಿ ಭೂಸ್ವಾಧೀನ ಅಧಿನಿಯಮ 2013ರ ಅನ್ವಯ ಭೂಸ್ವಾಧೀನ ಪ್ರಕ್ರಿಯೆಗಾಗಿ ಸಾಮಾಜಿಕ ಪರಿಣಾಮ ನಿರ್ಧರಣೆ ಅಧ್ಯಯನ (Social Impact Assessment Study) ಮಾಡಿಸಬೇಕಿರುತ್ತದೆ.

ಈ ಹಿನ್ನೆಲೆಯಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನೀರಾವರಿ ನಿಗಮ ನಿಯಮಿತ, ಬೆಂಗಳೂರು ರವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ಈ ಕೆಳಗಿನಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂ: ಜಸಂಇ 35 ವಿಬ್ಯಾಇ 2014, ಬೆಂಗಳೂರು, ದಿನಾಂಕ: 06.10.2015.**

ಎತ್ತಿನಹೊಳೆ ಸಮಗ್ರ ಕುಡಿಯುವ ನೀರಿನ ಯೋಜನೆಗೆ ಸಂಬಂಧಿಸಿದಂತೆ ಭೂಸ್ವಾಧೀನ ಪ್ರಕ್ರಿಯೆಗಾಗಿ ತ್ವರಿತ ಸಾಮಾಜಿಕ ಪರಿಣಾಮಗಳ ನಿರ್ಧರಣಾ ಪ್ರಕ್ರಿಯೆಯನ್ನು ಕಂದಾಯ ಇಲಾಖೆಯ ಮೂಲಕ ಕೈಗೊಳ್ಳುವಂತೆ ಆದೇಶಿಸಿದೆ.

ಈ ಆದೇಶವನ್ನು ಕಂದಾಯ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ ಕಂಇ 07 ಭೂಸ್ವಾಹಾ 2015, ದಿನಾಂಕ: 28.02.2015ರಲ್ಲಿ, ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 140 ಆಕೋ–1/2015/ಆರ್ಥಿಕ ಇಲಾಖೆ (ಲೋ.ಆಕೋ–1) ದಿನಾಂಕ: 23.03.2015ರಲ್ಲಿ ಹಾಗೂ ಕಾನೂನು ಇಲಾಖೆಯ ಟಿಪ್ಪಣಿ ಸಂಖ್ಯೆ: LAW 152 OPN 2015/ ಜಸಂಇ 35 ವಿಬ್ಯಾಇ 2014 (ಭಾಗ–1) Law Dept, (Opp-2), ದಿನಾಂಕ: 19.03.2015ರಲ್ಲಿ ನೀಡಿರುವ ಅಭಿಪ್ರಾಯಗಳನ್ನು ಪರಿಗಣಿಸಿ ಹೊರಡಿಸಲಾಗಿದೆ.

**PR. 107**

**SC. 100**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಎಸ್.ನಾಗರಾಜ**
ಸರ್ಕಾರದ ಅಧೀನ ಕಾರ್ಯದರ್ಶಿ (ತಾಂತ್ರಿಕ–4),
ಜಲ ಸಂಪನ್ಮೂಲ ಇಲಾಖೆ.

## WOMEN AND CHILD DEVELOPMENT AND EMPOWERMENT OF DIFFERENTLY ABLED AND SENIOR CITIZENS SECRETARIAT

**SUB:** Terms and Conditions in respect of Shri K.S. Rajanna, State Commissioner for Persons with Disabilities.

**READ:**
1. Notification No: WCD 226 PHP 2013, Dated: 02.09.2013.
2. Notification No: WCD 226 PHP 2013, Dated: 08.10.2013.
3. Notification No: WCD 436 PHP 2014, Dated: 16.01.2015.
4. Notification No: WCD 436 PHP 2014, Dated: 21.01.2015.
5. Hon'ble High Court Order Dated: 03.08.2015, in W.P. No. 58746/2013 and 1096/2014 (S-res-PIL)
6. Hon'ble High Court Order Dated: 26.09.2015, in Review Petition No: 553/2015 and 593/2015.

**Preamble:**

In Government Notification read at (1) above, Sri K.S. Rajanna has been appointed as Commissioner for Persons with Disabilities under section 60(1) of the Persons with Disabilities (Equal opportunities, Protection of Rights and Full Participation) Act, 1995. In Government Notification read at (2) above, the terms and conditions have been issued under section 60(3) of the Act. In Government Notification read at (3) above Smt. Kamalakshi Rajanna has been appointed as State Commissioner but she has not reported for the post. Further in Government Notification read at (4) above, Sri. K.S. Rajanna has been appointed as Commissioner for Persons with Disabilities under section 60(1) of the Persons with Disabilites (Equal opportunities, Protection of Rights and Full Participation) Act, 1995.

Before issue of temes & conditions, a public interest litigation petition has been filed vide Writ No: 58746/13 and 1096/14 in the Hon'ble High Court of Karnataka. In these Writ petitions, challenging the inaction on the part of the authorities in not framing the rules for appointment of State Commissioner under Sub-Section (3) of Section 60 of the Persons with Disabilities (Equal opportunities, Protection of Rights and Full Participation) Act, 1995, On hearing these petitions, the Hon'ble High Court has passed Judgement read at (5) above, that the competent Authority shall frame the rules peremptorily Within four months from the date of Judgment till the rules are framed, let the respondent No.3 Sri. K.S. Rajanna continue in the post of the State Commissioner for Persons with Disabilities.

Sri. K.S. Rajanna, has filed review petition No: 553/2015 and 593/2015 read at (6) above, agaist the Orders passed in PIL Petition No.58746/13 and 1096/14 on 03.08.2015 by the Ho'ble High Court of Karnataka. The Hon'ble High Court of Karnataka has dismissed the review petition as there is no merit in the review petition. In view of the Court Verdict, a Proposal to notify draft rules has been submitted to the Hon'ble Cabinet for its approval.

As Hon'ble High Court has permitted Sri. K.S. Rajanna to continue till the rules are framed. Government has decided to issue the terms and conditions within the ambit of the Judgement of the Hon'ble High Court of Karnataka. Accordingly the following Terms and Conditions are issued.

**GOVERNMENT ORDER NO: WCD 436 PHP 2014, BENGALURU, DATED: 12.01.2016.**

Government is pleased to issue the following Terms and Conditions to Sri. K.S. Rajanna, the State Commissioner for Disabilities under section 60(3) of the Persons with Disabilities (Equal opportunities, Protection of Rights and Full Participation) Act, 1995.

1. The term of the State Commissioner is with effect from 21.01.2015 till framing the rules or until further orders, whichever is earlier as per direction of Hon'ble High Court of Karnataka in PIL Writ Petition No: 58746/13 and 1096/14, Dated: 03.08.2015.
2. The salary of Sri. K.S. Rajanna, Commissioner for Disabilities is fixed at the minimum of the scale of pay of ₹. 56550-79800 applicable to the post of Secretary to Government (Non-IAS) i.e., at ₹. 56,550/- (fixed p.m. plus usual allowances like Dearness Allowance, House Rent Allowance, City Compensatory Allowance and other perquisites as admissible to a Secretary to the Government, as per Rule 33 of The Persons with Disabilities (Equal opportunities, Protection of Righs and Full Participation) (Karnataka) Rules, 2003.
3. He can exercise general administrative powers and those financial powers delegated to him from time to time by the State Government.
4. The officers and employees provided to the Commissioner shall discharge their functions under the general Superintendence of the Commissioner.
5. The Commissioner may resign at any time by writing under his hand addressed to the State Government and the seat of the Commissioner shall thereupon become vacant.
6. The Commissioner cannot hold any other post simultaneously.

**PR. 87**

By Order and in the name of Governor of Karnataka,
**JAYALAKSHMI**
Under Secretary to Government-2
Department of Women and Child Development and
Empowerment of Differently Abled and Senior Citizens

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

## ಅಧಿಕೃತ ಜ್ಞಾಪನ

**ಸಂಖ್ಯೆ: ಸಿಆಸುಇ 1 ರಾರಾಆ 2016, ಬೆಂಗಳೂರು, ದಿನಾಂಕ: 12.01.2016.**

**ವಿಷಯ:** 2016ರ ಜನವರಿ 30ರಂದು ಪೂರ್ವಾಹ್ನ 11.00 ಗಂಟೆಗೆ ದೇಶದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಹುತಾತ್ಮರಾದವರ ಜ್ಞಾಪಕಾರ್ಥವಾಗಿ ಮೌನ ಆಚರಿಸುವ ಬಗ್ಗೆ.

ಭಾರತದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಪ್ರಾಣತೆತ್ತು ಹುತಾತ್ಮರಾದವರ ಸ್ಮರಣಾರ್ಥವಾಗಿ ಪ್ರತಿವರ್ಷ ಜನವರಿ 30ರಂದು ಪೂರ್ವಾಹ್ನ 11.00 ಗಂಟೆಗೆ ಎಲ್ಲಾ ಕೆಲಸ ಕಾರ್ಯಗಳನ್ನು ಹಾಗೂ ಚಲನೆಯನ್ನು ಸ್ಥಗಿತಗೊಳಿಸಿ ಮೌನ ಆಚರಿಸುವಾಗ ಅನುಸರಿಸಬೇಕಾದ ಕ್ರಮಗಳ ಬಗ್ಗೆ ಪ್ರತಿ ವರ್ಷವೂ ಸೂಚನೆಗಳನ್ನು ನೀಡಲಾಗುತ್ತಿದೆ. ಹುತಾತ್ಮರ ಸ್ಮರಣಾರ್ಥವಾಗಿ ಜನವರಿ 30ರಂದು ನಡೆಸುವ ಮೌನ ಆಚರಣೆಗೆ ಭಾರತ ಸರ್ಕಾರದ ಸೂಚನೆಗಳಂತೆ ಸ್ಥಾಯಿ ಸೂಚನೆಗಳನ್ನು ನೀಡಲಾಗಿದೆ.

1) ಜನವರಿ 30ರಂದು ಪೂರ್ವಾಹ್ನ 11.00 ಗಂಟೆಗೆ ರಾಜ್ಯದೆಲ್ಲೆಡೆ ಎಲ್ಲಾ ಕೆಲಸ ಕಾರ್ಯಗಳನ್ನು ಮತ್ತು ಚಲನೆಯನ್ನು ಸ್ಥಗಿತಗೊಳಿಸಿ 2 ನಿಮಿಷಗಳ ಕಾಲ ಮೌನ ಆಚರಿಸುವುದು.

2) ಎಲ್ಲಿ ಸೈರನ್‌ಗಳು ಅಥವಾ ಸೈನಿಕರ ಬಂದೂಕುಗಳು ಲಭ್ಯವಿವೆಯೋ ಅಂತಹ ಕಡೆಗೆ ಎರಡು ನಿಮಿಷಗಳು ಮೌನ ಆಚರಣೆಯ ಕಾಲವನ್ನು ಪ್ರಾರಂಭ ಮತ್ತು ಮುಕ್ತಾಯಕ್ಕೆ ಸೈರನ್ ಅಥವಾ ಸೈನಿಕರ ಬಂದೂಕುಗಳ ಶಬ್ದದ ಮೂಲಕ ಎರಡು ನಿಮಿಷ ಮೌನ ಆಚರಣೆ ಪೂರ್ವಾಹ್ನ 10.59 ರಿಂದ 11.00 ಗಂಟೆಯವರೆಗೆ ಸೈರನ್: ಬಂದೂಕು ಶಬ್ದ ಮಾಡಿಸುವುದು ಹಾಗೂ ಎರಡು ನಿಮಿಷದ ಮೌನ ಆಚರಣೆಯ ನಂತರ ಪುನ: 11.02 ರಿಂದ 11.03 ನಿಮಿಷದವರೆಗೆ ಸೈರನ್/ಬಂದೂಕು ಶಬ್ದವನ್ನು ಮಾಡಿಸುವುದು. ಈ ಪದ್ಧತಿಯನ್ನು ಸೈರನ್/ಬಂದೂಕು ಸೌಲಭ್ಯವಿರುವ ಕಡೆ ಅಳವಡಿಸಿಕೊಳ್ಳುವುದು.

3) ಶಬ್ದವು (ಎಲ್ಲಿ ಲಭ್ಯ ಇದೆಯೋ ಅಲ್ಲಿ) ಕೇಳಿದ ಕೂಡಲೇ ಅಲ್ಲಿ ವ್ಯಕ್ತಿಗಳು ಆರಂಭದ ಸೂಚನೆಗಾಗಿ ನಿಂತುಕೊಳ್ಳಬೇಕು ಮತ್ತು ಮೌನವನ್ನು ಆಚರಿಸಬೇಕು. ಪ್ರತಿಯೊಬ್ಬ ವ್ಯಕ್ತಿಯು ತನ್ನ ಕೊಠಡಿಯಲ್ಲಿ ಅಥವಾ ಇತರೆ ಯಾವುದೇ ಸ್ಥಳದಲ್ಲಿ ನಿಂತುಕೊಂಡು ಮೌನ ಆಚರಿಸುವುದಕ್ಕಿಂತ, ಒಂದೇ ವೇಳೆಗೆ ವ್ಯಕ್ತಿಗಳು ಒಂದು ಸ್ಥಳದಲ್ಲಿ ಸೇರಿ ಮೌನ ಆಚರಿಸಿದರೆ ಅದು ತುಂಬಾ ಪರಿಣಾಮಕಾರಿ ಮತ್ತು ಪ್ರಭಾವಕಾರಿ (effective and impressive) ಆಗುತ್ತದೆ. ಆದಾಗ್ಯೂ, ಇದು ಕೆಲಸ ಕಾರ್ಯಗಳಿಗೆ ತೀವ್ರ ತೊಂದರೆ ಆಗುವಂತಿದ್ದರೆ ಮೇಲೆ ತಿಳಿಸಿದಂತೆ ಒಂದೇ ಸ್ಥಳದಲ್ಲಿ ಸೇರಲು ಪ್ರಯತ್ನಿಸದೇ ಇರಬಹುದು. ಈ 2 ನಿಮಿಷಗಳಲ್ಲಿ ಎಲ್ಲಾ ವರ್ಕ್‌ಶಾಪ್‌ಗಳು ಮತ್ತು ಕಾರ್ಖಾನೆಗಳು ಕೆಲಸ ಸ್ಥಗಿತಗೊಳಿಸಬೇಕು. ಈ 2 ನಿಮಿಷದ ಅವಧಿಯಲ್ಲಿ ವರ್ಕ್‌ಶಾಪ್‌ಗಳು ಮತ್ತು ಕಾರ್ಖಾನೆಗಳು ಶಬ್ದ ಪ್ರಸಾರ ಮಾಡುವುದನ್ನು ನಿಲ್ಲಿಸಬೇಕು ಮತ್ತು ರಸ್ತೆಗಳಲ್ಲಿ ಸಂಚಾರ ಸ್ಥಗಿತಗೊಳಿಸಬೇಕು. ವಿಮಾನಗಳು, ಹಡಗುಗಳು, ರೈಲುಗಳು ಹೊರಡಲು ಬೆಳಿಗ್ಗೆ 11.00 ಗಂಟೆಯೆಂದು ನಿಗಧಿಪಡಿಸಿದ್ದಲ್ಲಿ ಅಂತಹವುಗಳನ್ನು ಆಯಾ ನಿಲ್ದಾಣಗಳಲ್ಲಿ 2 ನಿಮಿಷಗಳ ಕಾಲ ತಡೆ ಹಿಡಿಯಬೇಕು.

4) ಸಂಕೇತ (Signal) ವ್ಯವಸ್ಥೆ ಇರದಂತಹ ಪ್ರದೇಶದಲ್ಲಿ, ಬೆಳಿಗ್ಗೆ 11.00 ಗಂಟೆಗೆ 2 ನಿಮಿಷಗಳ ಮೌನ ಆಚರಿಸಲು ಸಂಬಂಧಪಟ್ಟವರಿಗೆಲ್ಲ ಸೂಕ್ತ ನಿರ್ದೇಶನವನ್ನು ಕಳುಹಿಸುವುದು.

5) ಇಲಾಖಾ ಮುಖ್ಯಸ್ಥರು ಮತ್ತು ಜಿಲ್ಲಾಧಿಕಾರಿಗಳು ವಿವರವಾದ ಕಾರ್ಯಕ್ರಮಗಳನ್ನು ರೂಪಿಸುವ ಸಂಪೂರ್ಣ ಜವಾಬ್ದಾರಿಯುಳ್ಳವರಾಗಿರುತ್ತಾರೆ. ಬೆಳಿಗ್ಗೆ 10.44 ರಿಂದ 10.56 ಗಂಟೆವರೆಗೆ (i) "ಸುಮಿರನ ಕರಲೆ ಮೇರೆ ಮನ್" (ii) "ವೈಷ್ಣವೋ ಜನತೋ ತೇನೆ ಕಹಿಯೇ" ಮತ್ತು (iii) "ರಘುಪತಿ ರಾಘವ ರಾಜಾರಾಂ" ಈ ಕ್ರಮದಲ್ಲಿ 3 ಭಜನೆಗಳನ್ನು ಹಾಡಬೇಕು ಮತ್ತು ಈ ಕಾರ್ಯಕ್ರಮವು ಸಮಾರಂಭದ ಭಾಗ ಆಗಬಹುದು.

6) ಶಬ್ದ ಮಾಡುವ ಬಗ್ಗೆ ಬಂದೂಕು ಹೊಡೆಯುವುದರಿಂದ ಅಥವಾ ಸೈರನ್‌ಗಳನ್ನು ಬೆಂಗಳೂರಿನಲ್ಲಿ ಮತ್ತು ಜಿಲ್ಲಾ ಕೇಂದ್ರಗಳಲ್ಲಿ ಮತ್ತು ಇತರೆ ನಗರ/ಪಟ್ಟಣಗಳಲ್ಲಿ ಸಾಧ್ಯವಾದಷ್ಟು ಮಟ್ಟಿಗೆ ಸೂಕ್ತ ವ್ಯವಸ್ಥೆಗಳನ್ನು ಮಾಡಲು ಕರ್ನಾಟಕ ರಾಜ್ಯದ ಆರಕ್ಷಕ ಮಹಾನಿರೀಕ್ಷಕರು ಕ್ರಮ ತೆಗೆದುಕೊಳ್ಳುವುದು.

2. ಕೆಲವು ಕಛೇರಿಗಳಲ್ಲಿ ಈ 2 ನಿಮಿಷಗಳ ಮೌನ ಆಚರಣೆಯನ್ನು ಮಾಡುತ್ತಿರುವಾಗ ಸಾಮಾನ್ಯ ಜನತೆ ಈ ಮೌನ ಆಚರಣೆ ಸಂದರ್ಭದ ಪಾವಿತ್ರ್ಯತೆಯನ್ನು ಗಮನದಲ್ಲಿ ಇಡದೇ ತನ್ನ ಕಾರ್ಯದಲ್ಲಿ ನಿರತವಾಗುವುದನ್ನು ಗಮನಿಸಲಾಗಿದೆ. ಆದುದರಿಂದ ಹುತಾತ್ಮರ ದಿನಾಚರಣೆಯನ್ನು ಸೂಕ್ತವಾಗಿ ಸಲ್ಲಿಸಬೇಕಾದ ಪಾವಿತ್ರ್ಯತೆಯಿಂದ ಆಚರಿಸಬೇಕಾಗಿರುವುದರಿಂದ, ಸಾಮಾನ್ಯ ಜನತೆಯೂ ಭಾಗವಹಿಸುವುದರೊಡನೆ ಈ ಹುತಾತ್ಮರ ದಿನಾಚರಣೆಯನ್ನು ತಪ್ಪದೇ ಆಚರಿಸಬೇಕಾಗಿರುವ ಎಲ್ಲಾ ಕಾರ್ಯಕ್ರಮಗಳನ್ನು ಕೈಗೊಳ್ಳಬೇಕೆಂದು ಸಂಬಂಧಪಟ್ಟ ಎಲ್ಲಾ ಪ್ರಾಧಿಕಾರಗಳಿಗೆ ಸೂಚಿಸಲಾಗಿದೆ. ಈ ಉದ್ದೇಶಕ್ಕಾಗಿ ಕೆಳಕಾಣಿಸಿದ ಕ್ರಮಗಳನ್ನು ಕೈಗೊಳ್ಳಬೇಕೆಂದು ಕೋರಲಾಗಿದೆ.

(1) ಹುತಾತ್ಮರ ದಿನವನ್ನು ಪೂರ್ಣ ಪಾವಿತ್ರ್ಯತೆ ಮತ್ತು ಯೋಗ್ಯವಾದ (befitting) ರೀತಿಯಲ್ಲಿ ಆಚರಿಸಲು ರಾಜ್ಯದ ಎಲ್ಲಾ ವಿದ್ಯಾ ಸಂಸ್ಥೆಗಳಿಗೆ ಸೂಚನೆಗಳನ್ನು ನೀಡುವುದು. ಈ ದಿನದ ವಿಶೇಷತ್ವಕ್ಕೆ ಸಂಬಂಧಿಸಿದಂತೆ ಭಾಷಣಗಳನ್ನು, ಅದರಲ್ಲೂ ವಿಶೇಷವಾಗಿ ಭಾರತದ ಸ್ವಾತಂತ್ರ್ಯದಲ್ಲಿ ಸ್ವಾತಂತ್ರ್ಯ ಹೋರಾಟಗಾರರ ಪಾತ್ರವನ್ನು ತಿಳಿಸುವಂತಹ ಭಾಷಣ/ಚರ್ಚೆಗಳನ್ನು ಏರ್ಪಡಿಸಬೇಕು. ಈ ಭಾಷಣಗಳ ಮುಖ್ಯಾಂಶಗಳಲ್ಲಿ ಕಷ್ಟಪಟ್ಟು ಗಳಿಸಿದ ಸ್ವಾತಂತ್ರ್ಯವನ್ನು ಉಳಿಸುವುದು ಸಂರಕ್ಷಿಸುವುದು ಮತ್ತು ಶ್ರೀಮಂತಗೊಳಿಸುವುದಲ್ಲದೆ ರಾಷ್ಟ್ರದ ಐಕ್ಯತೆಯನ್ನು ಉತ್ತೇಜಿಸುವುದು ಮತ್ತು ಒಂದೇ ಗುರಿಗಳು ಮತ್ತು ಆದರ್ಶಗಳಿಗೆ ಬದ್ಧರಾಗುವ ಅಂಶಗಳನ್ನೊಳಗೊಂಡಿರಬೇಕು.

(2) ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿ ಹುತಾತ್ಮರಾದವರ ಪಾತ್ರ ಮತ್ತು ರಾಷ್ಟ್ರೀಯ ಐಕ್ಯತೆಯ (National Integration) ಮೂಲ ಉದ್ದೇಶಗಳು ಇರುವ ಸಾಂಸ್ಕೃತಿಕ ಕಾರ್ಯಕ್ರಮಗಳ/ಡಾಕ್ಯುಮೆಂಟರಿ ಚಿತ್ರಗಳ ಪ್ರದರ್ಶನಗಳ ಏರ್ಪಾಡುಗಳನ್ನು ರಾಜ್ಯದ ಪ್ರಚಾರ ಘಟಕಗಳು ಮಾಡಬಹುದು.

(3) ಸದಸ್ಯರು ಹಾಗೂ ಸಂಯೋಜಿತ ಸಂಘ ಮತ್ತು ಸಂಸ್ಥೆಗಳು ಹುತಾತ್ಮರ ದಿನಾಚರಣೆಯನ್ನು ಸೂಕ್ತವಾಗಿ ಆಚರಿಸಬೇಕೆಂಬುದರ ಕುರಿತು ವಿವಿಧ ವಾಣಿಜ್ಯ ಮತ್ತು ಕೈಗಾರಿಕಾ ಮಹಾಮಂಡಳಿಗಳನ್ನು (Chamber of Commerce and Industries) ಕೋರಬಹುದು.

3. ಸರ್ಕಾರದ ಎಲ್ಲಾ ಅಪರ ಮುಖ್ಯ ಕಾರ್ಯದರ್ಶಿಗಳು, ಪ್ರಧಾನ ಕಾರ್ಯದರ್ಶಿಗಳು, ಕಾರ್ಯದರ್ಶಿಗಳು, ಎಲ್ಲಾ ಪ್ರಾದೇಶಿಕ ಆಯುಕ್ತರು, ಇಲಾಖಾ ಮುಖ್ಯಸ್ಥರು, ಎಲ್ಲಾ ಜಿಲ್ಲೆಗಳ ಜಿಲ್ಲಾಧಿಕಾರಿಗಳು ಮತ್ತಿತರೆ ಸಂಬಂಧಪಟ್ಟ ಅಧಿಕಾರಿಗಳು ಮೇಲೆ ಸೂಚಿಸಿರುವ ನಿರ್ದೇಶನಗಳನ್ನು ತಕ್ಕುದಾದ ರೀತಿಯಲ್ಲಿ ಅನುಸರಿಸಲು ಸೂಕ್ತ ಕ್ರಮ ಕೈಗೊಳ್ಳಬೇಕೆಂದು ಕೋರಲಾಗಿದೆ.

**PR. 110**

**SC. 100**

**ಆರ್. ಮಹಾದೇವ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಆಸುಇ. (ರಾಜಕೀಯ)

## ಪ್ರವಾಸೋದ್ಯಮ ಸಚಿವಾಲಯ

**ವಿಷಯ:** ಪ್ರವಾಸೋದ್ಯಮ ಯೋಜನೆಗಳಿಗೆ ಗುತ್ತಿಗೆ ಮೇಲೆ ಭೂಮಿ ನೀಡುವ ಸಂಬಂಧ ಮಾರ್ಗಸೂಚಿಗಳ ರಚನೆ.

**ಓದಲಾಗಿದೆ:** ಪ್ರವಾಸೋದ್ಯಮ ನಿರ್ದೇಶಕರ ಕಡತ ಸಂಖ್ಯೆ: ಪ್ರಇ/ಯೋ–5/20/2015–16

**ಪ್ರಸ್ತಾವನೆ:**

2015–20ರ ಕರ್ನಾಟಕ ಪ್ರವಾಸೋದ್ಯಮ ನೀತಿಯನ್ವಯ ಬಂಡವಾಳ ಹೂಡಿಕೆದಾರರಿಗೆ ಉತ್ತೇಜಕಗಳನ್ನು ನೀಡುವ ಸಲುವಾಗಿ ಪ್ರವಾಸೋದ್ಯಮ ಇಲಾಖೆಯ ಜಮೀನನ್ನು "ಗುತ್ತಿಗೆ ಆಧಾರದ ಮೇಲೆ ನೀಡಲಾಗುವುದೆಂದು ವ್ಯಾಖ್ಯಾನಿಸಲಾಗಿದೆ. ಪ್ರವಾಸೋದ್ಯಮ ಇಲಾಖೆಯ 18 ಸ್ವತ್ತುಗಳನ್ನು ಖಾಸಗಿಯವರಿಗೆ ROMT [ನವೀಕರಿಸು, ನಿರ್ವಹಿಸು ಮತ್ತು ವರ್ಗಾಯಿಸು] ಚೌಕಟ್ಟಿನಡಿ ನೀಡಲು ಆದೇಶ ಸಂಖ್ಯೆ: TD 175 TTT 2014, ದಿನಾಂಕ: 19.11.2014ರಲ್ಲಿ ಅನುಮೋದನೆ ನೀಡಲಾಗಿದೆ.

2015–20ರ ಕರ್ನಾಟಕ ಪ್ರವಾಸೋದ್ಯಮ ನೀತಿ ಕಂಡಿಕೆ 4.1 ಈ ಕೆಳಕಂಡಂತಿದೆ.

> ಪ್ರವಾಸೋದ್ಯಮ ಮೂಲಸೌಕರ್ಯ ಯೋಜನೆಗಳನ್ನು ಅಭಿವೃದ್ಧಿಪಡಿಸುವುದಕ್ಕಾಗಿ, ಸರ್ಕಾರದ ಭೂಮಿಯನ್ನು 30 ವರ್ಷಗಳ ಕಾಲ ಖಾಸಗಿ ಅಭಿವೃದ್ಧಿದಾರರು/ಉದ್ಯಮಿಗೆ ಗುತ್ತಿಗೆ ನೀಡಬಹುದು. ಇದನ್ನು [ಸೂಕ್ತ ಗುತ್ತಿಗೆ/ಅಭಿವೃದ್ಧಿ ಒಪ್ಪಂದಗಳನ್ನು ಮಾಡಿಕೊಳ್ಳುವ ಮೂಲಕ] ಮತ್ತೆ 30 ವರ್ಷಗಳ ಅವಧಿಗೆ ನವೀಕರಿಸಬಹುದಾಗಿದೆ ಇದನ್ನು ಪ್ರವಾಸೋದ್ಯಮ ಇಲಾಖೆ/ಸಂಬಂಧಪಟ್ಟ ಸಂಸ್ಥೆಯು ಆಯಾ ಪ್ರಕರಣದ ಸ್ವರೂಪದ ಆಧಾರದ ಮೇಲೆ ನಿರ್ಧರಿಸತಕ್ಕದ್ದು.

ಪ್ರವಾಸೋದ್ಯಮ ಇಲಾಖೆಯ ವ್ಯಾಪ್ತಿಯಲ್ಲಿ 1062 ಎಕರೆ ಭೂಮಿ ಇರುವುದಾಗಿ ಅಂದಾಜಿಸಲಾಗಿದೆ. ಸದರಿ ಭೂಮಿಯನ್ನು ಪ್ರವಾಸೋದ್ಯಮ ಇಲಾಖೆಯ ಹೆಸರಿನಲ್ಲಿ ಜಿಲ್ಲಾಧಿಕಾರಿ/ಸರ್ಕಾರ ಕಾಯ್ದಿರಿಸಿದ್ದು, ಕೆಲವು ಪ್ರಕರಣಗಳಲ್ಲಿ ಇಲಾಖೆಯ ಭೂ ಸ್ವಾಧೀನ ಕಾಯಿದೆ ಪ್ರಕಾರ ಜಮೀನು ಪಡೆದಿರುತ್ತದೆ.

ಪ್ರವಾಸೋದ್ಯಮ ನೀತಿ ಜಾರಿಗೊಳಿಸುವ ನಿಟ್ಟಿನಲ್ಲಿ ಪ್ರವಾಸೋದ್ಯಮ ಯೋಜನೆಗಳಿಗಾಗಿ ಗುತ್ತಿಗೆ ಆಧಾರದ ಮೇಲೆ ಭೂಮಿಯನ್ನು ನೀಡುವ ಬಗ್ಗೆ ಮಾರ್ಗಸೂಚಿಗಳನ್ನು ರಚಿಸಬೇಕಾಗಿದ್ದು, ಭೂಮಿ ಪರಬಾರೆ ಬಗ್ಗೆ ಸರ್ಕಾರಿ ಸಂಸ್ಥೆಗಳು ಹಾಗೂ ಇತರೆ ರಾಜ್ಯ ಸರ್ಕಾರಗಳ ನೀತಿಗಳನ್ನು ಪರಿಶೀಲಿಸಿ ಕರ್ನಾಟಕದಲ್ಲಿನ ಪ್ರವಾಸೋದ್ಯಮ ಯೋಜನೆಗಳಿಗಾಗಿ ಭೂಮಿಯನ್ನು ಗುತ್ತಿಗೆ ನೀಡಲು ಮಾರ್ಗಸೂಚಿಗಳನ್ನು ರಚಿಸಲು ಸರ್ಕಾರ ತೀರ್ಮಾನಿಸಿರುವ ಸಂಬಂಧ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಪ್ರಇ 438 ಪ್ರವಾಯೋ 2015, ಬೆಂಗಳೂರು, ದಿನಾಂಕ: 03.02.2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕದಲ್ಲಿನ ಪ್ರವಾಸೋದ್ಯಮ ಯೋಜನೆಗಳಿಗಾಗಿ ಕೆಳಕಂಡ ಮಾರ್ಗಸೂಚಿಗಳನ್ನು ಅನುಸರಿಸಿ ಭೂಮಿಯನ್ನು ಗುತ್ತಿಗೆ ನೀಡಲು ಸರ್ಕಾರ ಮಂಜೂರಾತಿ ನೀಡಿ ಆದೇಶಿಸಿದೆ.

ಎ. ಪ್ರವಾಸೋದ್ಯಮ ಸಾಮರ್ಥ್ಯವನ್ನು ಗಮನದಲ್ಲಿಟ್ಟುಕೊಂಡು ಇಲಾಖೆ ಬಿಡ್ಡಿಂಗ್ ಪ್ರಕ್ರಿಯೆ ಕೈಗೊಳ್ಳುವ ಮೊದಲು ಭೂಮಿಯನ್ನು ಅನುಕೂಲತೆ ತಕ್ಕಂತೆ ವಿಭಾಗಿಸುವುದು.

ಬಿ. ಬಿಡ್ ಪ್ರಕ್ರಿಯೆ ಕೈಗೊಳ್ಳುವ ಮೊದಲು ಲಭ್ಯವಿರುವ ಭೂಮಿಯ ಬಗ್ಗೆ ಸಂಪೂರ್ಣ ಲ್ಯಾಂಡ್ ಆಡಿಟ್ ಮತ್ತು ಯೋಜನೆಯ ಸಾಮರ್ಥ್ಯ ಕೈಗೊಳ್ಳತಕ್ಕದ್ದು.

ಸಿ. ಬಂಡವಾಳ ಹೂಡಿಕೆದಾರರಿಂದ ಭೂಮಿ ಮಂಜೂರಾತಿಗೆ ಸಂಬಂಧಿಸಿದ ಪ್ರಸ್ತಾವನೆಗಳ ವ್ಯವಹರಿಸುವಾಗ ಇಲಾಖೆ ಸ್ಪರ್ಧಾತ್ಮಕ ಮತ್ತು ಪಾರದರ್ಶಕ ಬಿಡ್ಡಿಂಗ್ ಪ್ರಕ್ರಿಯೆಗಳನ್ನು ಕೈಗೊಳ್ಳತಕ್ಕದ್ದು.

ಡಿ. ಕಂದಾಯ ಇಲಾಖೆಯು ಕರ್ನಾಟಕ ಭೂ ಮಂಜೂರಾತಿ [ತಿದ್ದುಪಡಿ] ನಿಯಮಗಳು–2015ರ ಪ್ರಕಾರ ನಿಗದಿಪಡಿಸಿರುವ ಮಾರ್ಗದರ್ಶನ ಮೌಲ್ಯಕ್ಕಿಂತ ಕಡಿಮೆ ಇಲ್ಲದಂತೆ ಬಿಡ್ ಮೌಲ್ಯ ನಿಗಧಿಪಡಿಸಿರುವುದನ್ನು ಇಲಾಖೆ ಖಚಿತಪಡಿಸಿಕೊಳ್ಳತಕ್ಕದ್ದು.

ಇ. ಗುತ್ತಿಗೆ ಅವಧಿ 60 ವರ್ಷಗಳಿಗೆ ಇರತಕ್ಕದ್ದು.

ಎಫ್. ಗುತ್ತಿಗೆಯ ಪೂರ್ಣ ಮೊತ್ತವನ್ನು, ಭೂ ಮಂಜೂರಾತಿ ಪತ್ರ ಹೊರಡಿಸಿದ 180 ದಿನಗಳೊಳಗಾಗಿ ಶೇ.100 ರಷ್ಟು ಪಾವತಿಸತಕ್ಕದ್ದು.

ಜಿ. ಶೇ. 100 ರಷ್ಟು ಗುತ್ತಿಗೆ ಮೊತ್ತವನ್ನು ಪಾವತಿಸಿದ ನಂತರ ಮತ್ತು ಭೂಮಿಯನ್ನು ಹಸ್ತಾಂತರಿಸುವ ಮೊದಲು, 30 ದಿನಗಳೊಳಗಾಗಿ ಕರಾರು ಒಪ್ಪಂದವನ್ನು ಮಾಡಿಕೊಳ್ಳತಕ್ಕದ್ದು.

ಹೆಚ್. ಭೂಮಿಯನ್ನು ಹಸ್ತಾಂತರಿಸಿದ 9 ತಿಂಗಳೊಳಗಾಗಿ ಯೋಜನೆಯನ್ನು ಪ್ರಾರಂಭಿಸತಕ್ಕದ್ದು ಮತ್ತು 2 ವರ್ಷದೊಳಗಾಗಿ ಯೋಜನೆಯನ್ನು ಪೂರ್ಣಗೊಳಿಸತಕ್ಕದ್ದು. ಕೆಲವು ಯೋಗ್ಯ ಪ್ರಕರಣಗಳಲ್ಲಿ ನೈಜ ಕಾರಣಗಳ ಮೇಲೆ ಕಾಲಮಿತಿಯನ್ನು ಸರ್ಕಾರ ವಿಸ್ತರಿಸಬಹುದು.

ಐ. ಹಂಚಿಕೆದಾರರು ಸಂಬಂಧಿಸಿದ ಸ್ಥಳೀಯ ಸಂಸ್ಥೆಗಳಿಗೆ ಅವಶ್ಯ ತೆರಿಗೆ/ಕಂದಾಯ ಇತ್ಯಾದಿಗಳನ್ನು ಪಾವತಿಸುವುದು.

ಜೆ. ಪ್ರಚಲಿತದಲ್ಲಿರುವ ಟೌನ್ & ಕಂಟ್ರಿ ಪ್ಲಾನಿಂಗ್ ರೂಲ್ಸ್ ಮತ್ತು ಇತರೆ ನಿಯಂತ್ರಣ/ನಿಯಮಗಳ ಪ್ರಕಾರ ಭೂಮಿಯನ್ನು ಉಪಯೋಗ/ಅಭಿವೃದ್ಧಿಗೊಳಿಸತಕ್ಕದ್ದು.

ಕೆ. ಪ್ರವರ್ತಕರು ಸಂಬಂಧಿಸಿದ ಪ್ರಾಧಿಕಾರಗಳಿಂದ ಎಲ್ಲೆಲ್ಲಿ ಅವಶ್ಯಕತೆ ಇದೆಯೋ ಅಲ್ಲಿ ಸಿಎಫ್ಇ ಮತ್ತು ಸಿಎಫ್ಓ ಪರಿಸರ ತೀರುವಳಿ ಪತ್ರಗಳನ್ನು ಪಡೆಯುವುದು.

ಎಲ್. ಭೂಮಿ ಮತ್ತು ಕಟ್ಟಡವನ್ನು ಉಪಗುತ್ತಿಗೆ ಮಾಡಲು ಅವಕಾಶವಿರುವುದಿಲ್ಲ.

ಎಮ್. ಭಾಗೀದಾರರು ಪ್ರಚಲಿತದಲ್ಲಿರುವ ಕಾನೂನು ಮತ್ತು ನಿಯಮಗಳನ್ನು ಅಥವಾ ಇತರೆ ಯಾವುದೇ ಷರತ್ತು ಮತ್ತು ನಿಬಂಧನೆಗಳನ್ನು ಉಲ್ಲಂಘಿಸಿದಲ್ಲಿ ಗುತ್ತಿಗೆಯನ್ನು ರದ್ದುಗೊಳಿಸಲು ಮತ್ತು ಗುತ್ತಿಗೆ ಮೊತ್ತವನ್ನು ಮುಟ್ಟುಗೋಲು ಹಾಕಿಕೊಳ್ಳಲು ಅಧಿಕಾರವಿರುತ್ತದೆ.

ಎನ್. ಆಯಾ ಜಮೀನು ಇರುವ ಸ್ಥಳವನ್ನು ಪರಿಗಣಿಸಿ, ವಾರ್ಷಿಕ ಲೀಸ್ ಮೊತ್ತವನ್ನು ನಿಗಧಿಗೊಳಿಸಲಾಗುವುದು.

ಒ. ಒಂದು ವೇಳೆ ಗುತ್ತಿಗೆದಾರ ವ್ಯವಹಾರ ಮುಚ್ಚಿದಲ್ಲಿ ಅಥವಾ ಯೋಜನೆಯನ್ನು ಪೂರ್ಣವಾಗಿ ಅನುಷ್ಠಾನಗೊಳಿಸದೇ ಪರಿಸಮಾಪ್ತಿಗೊಳಿಸಿದಲ್ಲಿ ಕರಾರನ್ನು ತನ್ನಷ್ಟಕ್ಕೆ ತಾನೇ ರದ್ದುಗೊಳ್ಳುವುದು. ಮತ್ತು ಭೂಮಿ ಪ್ರವಾಸೋದ್ಯಮ ಇಲಾಖೆಯ ವಶಕ್ಕೆ ಬರುವುದು.

ಪಿ. ಎಲ್ಲೆಲ್ಲಿ ಕಟ್ಟಡಗಳು ಮತ್ತು ಇತರೆ ಆಸ್ತಿಗಳು ಇದ್ದಲ್ಲಿ ಸಕ್ಷಮ ಪ್ರಾಧಿಕಾರದ ಮೂಲಕ ಕಟ್ಟಡಗಳ ಮೌಲ್ಯವನ್ನು ಕೈಗೊಂಡು ಅಂತಹ ಪ್ರಕರಣಗಳಲ್ಲಿ ಬಿಡ್ಡುದಾರರು ಕಟ್ಟಡ ಮತ್ತು ಭೂಮಿಗೆ ಬಿಡ್ ಮಾಡತಕ್ಕದ್ದು.

ಕ್ಯೂ. ಸ್ವಿಸ್ ಚಾಲೆಂಜ್ ಪದ್ದತಿ–ಪ್ರವಾಸೋದ್ಯಮ ನೀತಿ 2015–20 ವಿವರಿಸಿರುವಂತೆ ಹೂಡಿಕೆದಾರರು ಪ್ರವಾಸೋದ್ಯಮ ಯೋಜನೆಯನ್ನು ಕೈಗೊಳ್ಳಲು ಸ್ವಯಂ ಪ್ರೇರಿತರಾಗಿ ಪ್ರಸ್ತಾವನೆ ಸಲ್ಲಿಸಬಹುದಾಗಿರುತ್ತದೆ. ಅಂತಹ ಪ್ರಕರಣಗಳಲ್ಲಿ ಎಲ್ಲಿ ಸ್ವಯಂ ಪ್ರೇರಿತವಾಗಿ ಹೂಡಿಕೆದಾರರು ಪ್ರಸ್ತಾವನೆ ಸಲ್ಲಿಸುತ್ತಾರೋ ಅಂತಹ ಪ್ರಸ್ತಾವನೆಗಳನ್ನು ಸ್ವಿಸ್ ಚಾಲೆಂಜ್ ಪದ್ದತಿಯನ್ನು ಅನುಸರಿಸಿ ಅಳವಡಿಸಿಕೊಳ್ಳತಕ್ಕದ್ದು.

ಕ್ಯೂ [1]. ಎಲ್ಲಿ ಸ್ವಯಂಪ್ರೇರಿತ ಪ್ರಸ್ತಾವನೆಗಳು ಹೂಡಿಕೆದಾರರಿಂದ ಸ್ವೀಕೃತವಾಗುತ್ತವೋ ಅಂತಹ ಪ್ರಕರಣಗಳನ್ನು ಇಲಾಖೆ ಪರಿಶೀಲಿಸಿ, ಲ್ಯಾಂಡ್ ಆಡಿಟ್‌ನ್ನು ಕೈಗೊಂಡು ಯೋಜನೆಗೆ ಅವಶ್ಯಕತೆ ಇರುವ ಭೂಮಿಯ ಬಗ್ಗೆ ಲೆಕ್ಕಮಾಡಿ ಸ್ಪರ್ಧಾತ್ಮಕ ಬಿಡ್‌ಗಳು ಬರುವಂತೆ ಭೂಮಿ ವಿಭಾಗವನ್ನು ನಿರ್ಮಾಣ ಮಾಡತಕ್ಕದ್ದು.

ಕ್ಯೂ [2]. ಅಂತಹ ಪ್ರಸ್ತಾವನೆಗಳ ಆಧಾರದ ಮೇಲೆ ಮತ್ತು ಇಲಾಖಾ ಅಭಿಪ್ರಾಯ ಸೇರ್ಪಡೆ ಮಾಡುವುದರೊಂದಿಗೆ ಬಿಡ್ ಡಾಕ್ಯೂಮೆಂಟನ್ನು ಅಂತಿಮಗೊಳಿಸುವುದು ಮತ್ತು ಮೂಲಸೌಕರ್ಯ ನೀತಿ, 2007 ಹಾಗೂ ಕಾಲಕಾಲಕ್ಕೆ ಆಗಿರುವ ತಿದ್ದುಪಡಿಯಲ್ಲಿ ವಿವರಿಸಿರುವನ್ವಯ ಸ್ವಿಸ್ ಚಾಲೆಂಜ್ ಪದ್ದತಿಯನ್ನು ಅನುಸರಿಸುವುದು.

ಕ್ಯೂ [3]. [ಎ] ಇಂದ [ಕ್ಯೂ] ರಲ್ಲಿರುವ ಇತರೆ ಸಾಮಾನ್ಯ ಷರತ್ತುಗಳು ಅನ್ವಯಿಸತಕ್ಕದ್ದು.

PR. 119
SC. 200

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಕೆ. ರವಿಮೂರ್ತಿ,**
ಸರ್ಕಾರದ ಜಂಟಿ ಕಾರ್ಯದರ್ಶಿ,
ಪ್ರವಾಸೋದ್ಯಮ ಇಲಾಖೆ.

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಕೆ. ಕೃಷ್ಣಮೂರ್ತಿ, ನಿವೃತ್ತ ಸರ್ಕಾರಿ ಅಭಿಯೋಜಕರು, ಇವರಿಗೆ 10 ವರ್ಷದ ಆಯ್ಕೆಕಾಲಿಕ ವೇತನ ಶ್ರೇಣಿ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಅಧಿಸೂಚನೆ ಸಂಖ್ಯೆ: ಲಾ 161 ಪಿಪಿಇ 2015, ದಿನಾಂಕ: 24.07.1989.
2. ಸರ್ಕಾರದ ಆದೇಶ ಸಂಖ್ಯೆ: ಒಇ 187 ಪಿಪಿಇ 1991, 18–01–1992.
3. ಶ್ರೀ ಕೆ. ಕೃಷ್ಣಮೂರ್ತಿ ಇವರ ಮನವಿ ದಿ: 26.12.2007.
4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಇವರ ಪತ್ರ ಸಂಖ್ಯೆ: ಡಿಪಿಎನ್/ ಸಿಶಾ/1/115/ 2008–09, ದಿನಾಂಕ: 12.05.2015, ಮತ್ತು 05.08.2015.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರಲ್ಲಿನ ಸರ್ಕಾರದ ಅಧಿಸೂಚನೆಯಲ್ಲಿ ಶ್ರೀ ಕೆ. ಕೃಷ್ಣಮೂರ್ತಿ, ನಿವೃತ್ತ ಸರ್ಕಾರಿ ಅಭಿಯೋಜಕರು, ಇವರು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇಮಕಗೊಂಡು ದಿನಾಂಕ: 03.08.1989 ರಂದು ಪೂರ್ವಾಹ್ನ ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (2)ರಲ್ಲಿನ ಸರ್ಕಾರದ ಆದೇಶದಲ್ಲಿ ಶ್ರೀ ಕೆ. ಕೃಷ್ಣಮೂರ್ತಿ ನಿವೃತ್ತ ಸರ್ಕಾರಿ ಅಭಿಯೋಜಕರು, ಇವರಿಗೆ ದಿನಾಂಕ: 23.06.1996 ರಂದು ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆ ಎಂದು ಸರ್ಕಾರವು ಘೋಷಿಸಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (3)ರಲ್ಲಿ ಶ್ರೀ ಕೆ. ಕೃಷ್ಣಮೂರ್ತಿ ಇವರು ಅಭಿಯೋಗ ನಿರ್ದೇಶಕರಿಗೆ ಮನವಿಯನ್ನು ಸಲ್ಲಿಸಿ, ತಾವು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ದಿನಾಂಕ: 03.08.1989ರ ಪೂರ್ವಾಹ್ನ ಕರ್ತವ್ಯಕ್ಕೆ ವರದಿ ಮಾಡಿಕೊಂಡಿದ್ದು, ಸತತವಾಗಿ ಯಾವುದೇ ಬಡ್ತಿ ಇಲ್ಲದೇ 10 ವರ್ಷಗಳ ಸೇವೆಯನ್ನು ದಿನಾಂಕ: 04.08.1999ರವರೆಗೆ ಸಲ್ಲಿಸಿರುವುದರಿಂದ ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: ಎಫ್‌ಡಿ 688 ಎಸ್‌ಆರ್‌ಪಿ 85, ದಿನಾಂಕ: 22.01.1985ರ ಅನುಸಾರ 10 ವರ್ಷಗಳ ಕಾಲಮಿತಿ ವೇತನ ಬಡ್ತಿಗೆ ಅರ್ಹರಿರುವುದರಿಂದ 10 ವರ್ಷಗಳ ಕಾಲಮಿತಿ ವೇತನ ಬಡ್ತಿಯನ್ನು ಮಂಜೂರು ಮಾಡುವಂತೆ ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (4)ರಲ್ಲಿ ನಿರ್ದೇಶಕರು, ಅಭಿಯೋಗ, ಇವರು ಸದರಿಯವರ ಮನವಿಯನ್ನು ಲಗತ್ತಿಸಿ ಕಳುಹಿಸುತ್ತಾ ಶ್ರೀ ಕೆ. ಕೃಷ್ಣಮೂರ್ತಿ, ಇವರು ದಿನಾಂಕ: 03.08.1989 ರಿಂದ 04.08.1999ರವರೆಗೆ ಯಾವುದೇ ವೇತನ ರಹಿತ ರಜೆ/ಅಸಾಧಾರಣ ರಜೆ ಪಡೆದಿರುವುದಿಲ್ಲವೆಂದು ಮತ್ತು ಸದರಿಯವರು ನಿಲಂಬನೆಯಲ್ಲಿರುವುದಿಲ್ಲವೆಂದು ತಿಳಿಸಿ, ಸದರಿ ಅಧಿಕಾರಿಯವರಿಗೆ 10 ವರ್ಷಗಳ ಸೇವೆಯನ್ನು ಪೂರೈಸಿರುವುದರಿಂದ 10 ವರ್ಷಗಳ ಕಾಲಮಿತಿ ವೇತನ ಬಡ್ತಿಯನ್ನು ಮಂಜೂರು ಮಾಡುವಂತೆ ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಶ್ರೀ ಕೆ. ಕೃಷ್ಣಮೂರ್ತಿ, ಇವರು ಒಂದೇ ಹುದ್ದೆಯಲ್ಲಿ 10 ವರ್ಷಗಳ ನಿರಂತರ ಸೇವೆಯನ್ನು ಸಲ್ಲಿಸಿರುವುದರಿಂದ ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಎಸ್‌ಆರ್‌ಪಿ (ಸಿಎಸ್‌ಸಿ) 85, ದಿನಾಂಕ: 22.01.1985ರ ಪ್ರಕಾರ ಸದರಿಯವರು ಕಾಲಮಿತಿ ವೇತನ ಬಡ್ತಿಯನ್ನು ಪಡೆಯಲು ಅರ್ಹರಿರುವುದರಿಂದ ದಿನಾಂಕ: 04.08.1999ಕ್ಕೆ ಅನ್ವಯವಾಗುವಂತೆ ಕಾಲಮಿತಿ ವೇತನ ಬಡ್ತಿಯನ್ನು ಮಂಜೂರು ಮಾಡಲು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 221 ಪಿಪಿಇ 2015, ಬೆಂಗಳೂರು, ದಿನಾಂಕ: 8ನೇ ಜನವರಿ 2016.**

ಪ್ರಸ್ತಾವನೆಯಲ್ಲಿನ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಕೆ. ಕೃಷ್ಣಮೂರ್ತಿ, ನಿವೃತ್ತ ಸರ್ಕಾರಿ ಅಭಿಯೋಜಕರು, ಇವರು ಸರ್ಕಾರದ ಆದೇಶ ಸಂಖ್ಯೆ: ಎಫ್ ಡಿ 1 ಎಸ್.ಆರ್.ಪಿ. (ಸಿಎಸ್‌ಸಿ)85, ದಿನಾಂಕ: 22.01.1985ರ ಪ್ರಕಾರ ಒಂದೆ, ಹುದ್ದೆಯಲ್ಲಿ 10 ವರ್ಷಗಳ ನಿರಂತರ ಸೇವೆಯನ್ನು ಸಲ್ಲಿಸಿರುವುದರಿಂದ ಕರ್ನಾಟಕ ನಾಗರಿಕ ಸೇವೆಗಳು(ಕಾಲಬದ್ಧ ಮುಂಬಡ್ತಿ) ನಿಯಮಗಳು, 1983ರನ್ವಯ ದಿನಾಂಕ: 04.08.1999ಕ್ಕೆ ಅನ್ವಯವಾಗುವಂತೆ ಕಾಲಮಿತಿ ವೇತನ ಬಡ್ತಿಯನ್ನು ಮಂಜೂರು ಮಾಡಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂ: ಆಇ 688 ಸೇ–2/2015, ದಿನಾಂಕ: 25–11–2015ರಲ್ಲಿ ನೀಡಿರುವ ಸಹಮತಿ/ಅಭಿಪ್ರಾಯದನ್ವಯ ಹೊರಡಿಸಲಾಗಿದೆ.

**PR. 88**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ದೇವೆಂದ್ರಪ್ಪ ಕಟ್ಟಿಮನಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ. (ಪೊಲೀಸ್ ಸೇವೆಗಳು–ಬಿ)

## ಒಳಾಡಳಿತ ಸಚಿವಾಲಯ

**ವಿಷಯ :** ಪೊಲೀಸ್ ಸಿಬ್ಬಂದಿಯವರಿಗೆ ಆರೋಗ್ಯ ಭಾಗ್ಯ ಯೋಜನೆಯಡಿ ವೈದ್ಯಕೀಯ ಚಿಕಿತ್ಸಾ ವೆಚ್ಚವನ್ನು ಖಜಾನೆಯಿಂದ ಬಟವಾಡೆ ಮಾಡುವ ಕುರಿತು.

**ಓದಲಾಗಿದೆ :**
1. ಸರ್ಕಾರದ ಪತ್ರ ಸಂಖ್ಯೆ: ಒಇ 04 ಪೊಸಿಇ 1999 ದಿನಾಂಕ: 01.04.2002.
2. ಉಪ ನಿರ್ದೇಶಕರು, ರಾಜ್ಯ ಹುಜೂರು ಖಜಾನೆ, ಬೆಂಗಳೂರು ಇವರ ಪತ್ರ ಸಂಖ್ಯೆ: ರಾಹುಕ/ ಡಿಕೌ/11/2014–15, ದಿನಾಂಕ: 01.01.2015.
3. ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ: ಎಬಿವೈ/263/2014–15, ದಿನಾಂಕ: 08.06.2015.

**ಪ್ರಸ್ತಾವನೆ:**

ರಾಜ್ಯ ಪೊಲೀಸ್ ಸಿಬ್ಬಂದಿ/ಅಧಿಕಾರಿಗಳಿಗೆ ವೈದ್ಯಕೀಯ ಸೌಲಭ್ಯಗಳು ಸಕಾಲದಲ್ಲಿ ಮತ್ತು ಯೋಗ್ಯ ದರದಲ್ಲಿ ದೊರೆಯುವಂತೆ ರೂಪಿಸಲು ಆರೋಗ್ಯ ಭಾಗ್ಯ ಯೋಜನೆ ಅನುಷ್ಠಾನಗೊಳಿಸಿದ್ದು, ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ದಿನಾಂಕ: 01.04.2002ರ ಪತ್ರದಲ್ಲಿ ಆರೋಗ್ಯ ಭಾಗ್ಯ ಯೋಜನೆಯನ್ನು ಜಾರಿಗೊಳಿಸಲು ತಾತ್ವಿಕ ಮಂಜೂರಾತಿಯನ್ನು ನೀಡಲಾಗಿದ್ದು, 2002ನೇ ಸಾಲಿನಿಂದ ಆರೋಗ್ಯ ಭಾಗ್ಯ ಯೋಜನೆಯು ಯಶಸ್ವಿಯಾಗಿ ನಡೆಯುತ್ತಿದೆ. ಕರ್ನಾಟಕ ಸರ್ಕಾರಿ ನೌಕರರ (ವೈದ್ಯಕೀಯ ಹಾಜರಾತಿ) ನಿಯಮ, 1963ರ ಪ್ರಕಾರ ಸರ್ಕಾರದ ಮಾನ್ಯತೆ ಪಡೆದ ಆಸ್ಪತ್ರೆಗಳನ್ನು ಮಾತ್ರ ಈ ಯೋಜನೆಯಡಿ ಗುರುತಿಸಲಾಗಿದ್ದು, ಚಿಕಿತ್ಸೆಯ ನಂತರ ಆಸ್ಪತ್ರೆಗಳಿಂದ ಸ್ವೀಕೃತವಾಗುವ ಬಿಲ್ಲುಗಳನ್ನು ಕೆ.ಜಿ.ಎಸ್. (ವೈದ್ಯಕೀಯ ಹಾಜರಾತಿ) ನಿಯಮ/ಸಿಜಿಹೆಚ್‌ಎಸ್ ಪ್ರಕಾರ ಪರಿಶೀಲಿಸಿ ಅರ್ಹ ಮೊತ್ತವನ್ನು ಆರೋಗ್ಯ ಭಾಗ್ಯ ನಿರ್ವಹಣೆಗಾಗಿ ರಚಿಸಲ್ಪಟ್ಟ ಕರ್ನಾಟಕ ಹೆಲ್ತ್ ವೆಲ್‌ಫೇರ್ ಟ್ರಸ್ಟ್‌ನಿಂದ ಪಾವತಿಸಿ, ನಂತರ ಸರ್ಕಾರದಿಂದ ಮರುಪಾವತಿಸಿ ಪಡೆಯಲು ಘಟಕಾಧಿಕಾರಿಗಳಿಗೆ ಕಳುಹಿಸಲಾಗುತ್ತಿರುತ್ತದೆ.

ಸಂಬಂಧಪಟ್ಟ ಘಟಕಾಧಿಕಾರಿಗಳು ವೈದ್ಯಕೀಯ ವೆಚ್ಚ ಮರುಪಾವತಿ ಬಿಲ್ಲುಗಳನ್ನು ಖಜಾನೆಗೆ ಸಲ್ಲಿಸಿ ಮರುಪಾವತಿ ಮೊತ್ತಕ್ಕೆ ಟ್ರಸ್ಟ್ ಹೆಸರಿನಲ್ಲಿ ಚೆಕ್ ಪಡೆದು ಕಳುಹಿಸುತ್ತಿದ್ದು, 2002ರಿಂದ ಇದು ನಿರಂತರವಾಗಿ ಸಾಗುತ್ತಿತ್ತು. ಆದರೆ ಪ್ರಸ್ತುತ ರಾಜ್ಯ ಹುಜೂರು ಖಜಾನೆ, ಬೆಂಗಳೂರು ಇವರಿಗೆ ಬಿಲ್ಲುಗಳನ್ನು ಸಲ್ಲಿಸಿದಾಗ ಆರ್ಥಿಕ ಇಲಾಖೆಯ ಒಪ್ಪಿಗೆ ಇಲ್ಲದೇ ಇರುವುದರಿಂದ ಬಿಲ್ಲುಗಳನ್ನು ತೀರ್ಣಗೊಳಿಸಲು ಸಾಧ್ಯವಿಲ್ಲ ಎಂಬುದಾಗಿ ಮೇಲೆ ಓದಲಾದ ಕ್ರಮ ಸಂಖ್ಯೆ: (2)ರ ಪತ್ರದಲ್ಲಿ ಉಪ ನಿರ್ದೇಶಕರು, ರಾಜ್ಯ ಹುಜೂರು ಖಜಾನೆ, ಬೆಂಗಳೂರು ಇವರು ತಿಳಿಸಿರುತ್ತಾರೆ. ಈ ಕುರಿತು ವೈದ್ಯಕೀಯ ವೆಚ್ಚ ಮರುಪಾವತಿ ಚೆಕ್ ನೀಡಲು ಮತ್ತೊಮ್ಮೆ ಕೋರಿದ್ದ ಹಿನ್ನೆಲೆಯಲ್ಲಿ ಕೆಲವು ಬಿಲ್ಲುಗಳನ್ನು ಖಜಾನೆಯಿಂದ ಮಂಜೂರಿಸಿ, ಚೆಕ್‌ಗಳನ್ನು ನೀಡಲಾಗಿರುತ್ತದೆ. ಆದರೆ ಇತ್ತೀಚೆಗೆ ಮತ್ತೊಮ್ಮೆ ಆಕ್ಷೇಪಣೆಗಳನ್ನು ಮಾಡುತ್ತಾ ಸರ್ಕಾರದ ಆದೇಶವನ್ನು ಕೇಳುತ್ತಿರುವುದಾಗಿ ಡಿ.ಜಿ. ಮತ್ತು ಐ.ಜಿ.ಪಿ., ಬೆಂಗಳೂರು ಇವರು ಮೇಲೆ ಓದಲಾದ ಕ್ರಮ ಸಂಖ್ಯೆ: (3) ಪತ್ರದಲ್ಲಿ ತಿಳಿಸಿರುತ್ತಾರೆ.

ವೈದ್ಯಕೀಯ ವೆಚ್ಚ ಮರುಪಾವತಿ ಬಿಲ್ಲುಗಳನ್ನು ಸರ್ಕಾರಕ್ಕೆ ಕಳುಹಿಸಿದ ಮರುಪಾವತಿ ಮೊತ್ತವನ್ನು ಟ್ರಸ್ಟ್ ಖಾತೆಗೆ ಜಮಾ ಮಾಡುವ ಬಗ್ಗೆ ಸರ್ಕಾರದಿಂದ ಕೋರಲಾದ ಸ್ಪಷ್ಟೀಕರಣದಲ್ಲಿ ಇದಕ್ಕೆ ಹೆಚ್ಚಿನ ಮಾನವ ಸಂಪನ್ಮೂಲ ಬೇಕಾಗಿರುವುದರಿಂದ ಮತ್ತು ವಿಳಂಬವಾಗುವುದರಿಂದ, ಆರೋಗ್ಯ ಭಾಗ್ಯ ಯೋಜನೆಯ ವೈದ್ಯಕೀಯ ವೆಚ್ಚ ಮರುಪಾವತಿಗೆ ಪೂರಕವಾಗಿ ಮುಂದುವರೆಯಲಿ ಎಂದು ಸರ್ಕಾರದ ಪತ್ರ ಸಂಖ್ಯೆ: ಒಸಾಇ 4 ಪೊಸಿಇ 2002 ದಿನಾಂಕ: 22.11.2003ರಲ್ಲಿ ತಿಳಿಸಲಾಗಿರುತ್ತದೆ.

ಮೇಲ್ಕಂಡ ಅಂಶಗಳ ಹಿನ್ನಲೆಯಲ್ಲಿ ಆರೋಗ್ಯ ಭಾಗ್ಯ ಯೋಜನೆಯಡಿಯಲ್ಲಿ ಚಿಕಿತ್ಸೆ ಪಡೆಯುವ ರಾಜ್ಯ ಪೊಲೀಸ್ ಸಿಬ್ಬಂದಿ/ಅಧಿಕಾರಿ ಹಾಗೂ ಅವಲಂಬಿತ ಕುಟುಂಬ ಸದಸ್ಯರ ಚಿಕಿತ್ಸಾ ವೆಚ್ಚವನ್ನು ಕರ್ನಾಟಕ ಸರ್ಕಾರ (ವೈದ್ಯಕೀಯ ಹಾಜರಾತಿ) ನಿಯಮ, 1963ರ ಪ್ರಕಾರ ಮರುಪಾವತಿಸಿಕೊಳ್ಳುವಾಗ ಕರ್ನಾಟಕ ಪೊಲೀಸ್ ಹೆಲ್ತ್ ವೆಲ್‌ಫೇರ್ ಟ್ರಸ್ಟ್ ಹೆಸರಿಗೆ ಖಜಾನೆಯಿಂದ ಚೆಕ್ ನೀಡುವ ಕುರಿತು ಸರ್ಕಾರದಿಂದ ಸೂಕ್ತ ಆದೇಶ ಹೊರಡಿಸಬೇಕೆಂದು ಮೇಲೆ ಓದಲಾದ ಕ್ರಮ ಸಂಖ್ಯೆ: (3)ರ ಪತ್ರದಲ್ಲಿ ಡಿ.ಜಿ. ಮತ್ತು ಐ.ಜಿ.ಪಿ. ಬೆಂಗಳೂರು ಇವರು ಕೋರಿರುತ್ತಾರೆ.

ಮೇಲ್ಕಂಡ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಆರೋಗ್ಯ ಭಾಗ್ಯ ಯೋಜನೆಯಡಿಯಲ್ಲಿ ಚಿಕಿತ್ಸೆ ಪಡೆಯುವ ರಾಜ್ಯ ಪೊಲೀಸ್ ಸಿಬ್ಬಂದಿ/ಅಧಿಕಾರಿ ಹಾಗೂ ಅವಲಂಬಿತ ಕುಟುಂಬ ಸದಸ್ಯರ ಚಿಕಿತ್ಸಾ ವೆಚ್ಚವನ್ನು ಕರ್ನಾಟಕ ಸರ್ಕಾರ (ವೈದ್ಯಕೀಯ ಹಾಜರಾತಿ) ನಿಯಮ, 1963ರ ಪ್ರಕಾರ ಮರುಪಾವತಿಸಿಕೊಳ್ಳುವಾಗ ಕರ್ನಾಟಕ ಪೊಲೀಸ್ ಹೆಲ್ತ್ ವೆಲ್‌ಫೇರ್ ಟ್ರಸ್ಟ್ ಹೆಸರಿಗೆ ಜುಲೈ 2016ರ ಅಂತ್ಯದ ವರೆಗೂ ಖಜಾನೆಯಿಂದ ಚೆಕ್ ನೀಡಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 188 ಪೊಸಿಇ 2015, ಬೆಂಗಳೂರು, ದಿನಾಂಕ: 22.01.2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಆರೋಗ್ಯ ಭಾಗ್ಯ ಯೋಜನೆಯಡಿಯಲ್ಲಿ ಚಿಕಿತ್ಸೆ ಪಡೆಯುವ ರಾಜ್ಯ ಪೊಲೀಸ್ ಸಿಬ್ಬಂದಿ/ಅಧಿಕಾರಿ ಹಾಗೂ ಅವಲಂಬಿತ ಕುಟುಂಬ ಸದಸ್ಯರ ಚಿಕಿತ್ಸಾ ವೆಚ್ಚವನ್ನು ಕರ್ನಾಟಕ ಸರ್ಕಾರ (ವೈದ್ಯಕೀಯ ಹಾಜರಾತಿ) ನಿಯಮ, 1963ರ ಪ್ರಕಾರ ಮರುಪಾವತಿಸಿಕೊಳ್ಳುವಾಗ ಕರ್ನಾಟಕ ಪೊಲೀಸ್ ಹೆಲ್ತ್ ವೆಲ್‌ಫೇರ್ ಟ್ರಸ್ಟ್ ಹೆಸರಿಗೆ ಜುಲೈ 2016ರ ಅಂತ್ಯದವರೆಗೂ ಖಜಾನೆಯಿಂದ ಚೆಕ್ ನೀಡಲು ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 391:ಎಫ್ಆರ್:2015, ದಿನಾಂಕ: 16.01.2016ರಲ್ಲಿ ನೀಡಲಾದ ಸಹಮತಿಯೊಂದಿಗೆ ಹೊರಡಿಸಲಾಗಿದೆ.

**PR. 118**

**SC.100**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ದೇವೆಂದ್ರಪ್ಪ ಕಟ್ಟಿಮನಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ. (ಪೊಲೀಸ್ ಸೇವೆಗಳು)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಕು. ಸಹನ, ಎಸ್., ಆದಿಚುಂಚನಗಿರಿ ಮೆಡಿಕಲ್ ಕಾಲೇಜು, ಬೆಳ್ಳೂರು ಇವರಿಗೆ ಪ್ರಥಮ ವರ್ಷದ ಎಂಬಿಬಿಎಸ್ ಕೋರ್ಸಿನ ಬೋಧನಾ ಶುಲ್ಕ ಮರುಪಾವತಿ ಸಂಬಂಧ ವಿಳಂಬ ಮನ್ನಾ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :** ನಿರ್ದೇಶಕರು, ವೈದ್ಯಕೀಯ ಶಿಕ್ಷಣ ಇವರ ಪತ್ರ ಸಂಖ್ಯೆ: ವೈಶಿ/ಯುಜಿ–ಪಿಜಿ/ಶುಮ/01/2015–16, ದಿನಾಂಕ: 25.06.2015 & 04.11.2015.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ನಿರ್ದೇಶಕರು, ವೈದ್ಯಕೀಯ ಶಿಕ್ಷಣ ಇವರು ಕು: ಸಹನ, ಎಸ್. ಆದಿಚುಂಚನಗಿರಿ ಮೆಡಿಕಲ್ ಕಾಲೇಜು, ಬೆಳ್ಳೂರು ಇವರು ಎಂಬಿಬಿಎಸ್ ವ್ಯಾಸಂಗ ಮಾಡುತ್ತಿದ್ದು, ಪರಿಶಿಷ್ಠ ಜಾತಿಗೆ ಸೇರಿದವರಾಗಿರುತ್ತಾರೆ. ಇವರುಗಳ ಕುಟುಂಬದ ವಾರ್ಷಿಕ ವರಮಾನ ₹. 2.50 ಲಕ್ಷಕ್ಕಿಂತ ಅಧಿಕವಿದ್ದು, ಈ ನಿರ್ದೇಶನಾಲಯಕ್ಕೆ ಅರ್ಜಿ ಸಲ್ಲಿಸಲು ಅರ್ಹರಾಗಿರುತ್ತಾರೆ. ಇವರು ಮನವಿ ಸಲ್ಲಿಸಿ 2014–15ನೇ ಸಾಲಿನಲ್ಲಿ ಬೋಧನಾ ಶುಲ್ಕ ಮರುಪಾವತಿ ಕೋರಿ ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯಕ್ಕೆ ಅರ್ಜಿ ಸಲ್ಲಿಸಲು ಸಾಧ್ಯವಾಗಿರುವುದಿಲ್ಲ. ಆದ್ದರಿಂದ ಅರ್ಜಿಯನ್ನು ಹಾಲಿ ವರ್ಷದಲ್ಲಿ ಸಲ್ಲಿಸುತ್ತಿದ್ದು, ಶುಲ್ಕ ಮಂಜೂರು ಮಾಡಲು ಅವಕಾಶವಿಲ್ಲದಿದ್ದಲ್ಲಿ ಸರ್ಕಾರದಿಂದ ವಿಳಂಬ ಮನ್ನಾ ಆದೇಶ ಪಡೆದು ಮಂಜೂರು ಮಾಡಲು ಕೋರಿರುತ್ತಾರೆ.

ಸದರಿ ಮನವಿಗಳ ಬಗ್ಗೆ ಪರಿಶೀಲಿಸಿ, ಸರ್ಕಾರದ ಆದೇಶ ಸಂಖ್ಯೆ: ಎಸ್ ಡಬ್ಲ್ಯೂಎಲ್ 229 ಬಿಸಿಎ 80, ದಿನಾಂಕ: 16.12.1982ರಲ್ಲಿನ ನಿಯಮ IV

a) The Heads of the Institutions shall forward detailed information about each applicant in a form to be prescribed by the sanctioning authority (vide Rule IV) along with the declaration produced by the students. This information should be sent to the sanctioning authorities concerned on or before the date prescribed by them.

b) Students who fail to produce the declaration within the date prescribed by the sanctioned authority shall pay the fees which they would have been exempted from paying under these rules.

ಎಂದು ತಿಳಿಸಿರುವುದರಿಂದ ಅವರು ನಿಗಧಿತ ಅವಧಿಯಲ್ಲಿ ಅರ್ಜಿ ಸಲ್ಲಿಸದ ಕಾರಣ ಹಾಲಿ ವರ್ಷದಲ್ಲಿ ಹಿಂದಿನ ವರ್ಷದ ಶುಲ್ಕವನ್ನು ಈ ನಿರ್ದೇಶನಾಲಯದ ಅಧಿಕಾರ ವ್ಯಾಪ್ತಿಯಲ್ಲಿ ಮಂಜೂರು ಮಾಡಲು ಬರುವುದಿಲ್ಲ. ಈ ಬಗ್ಗೆ ಸರ್ಕಾರದಿಂದ ವಿಳಂಬ ಮನ್ನಾ ಆದೇಶ ನೀಡಿದ್ದಲ್ಲಿ ಮುಂದಿನ ಕ್ರಮ ತೆಗೆದುಕೊಳ್ಳಲಾಗುವುದೆಂಬ ಮಾಹಿತಿಯನ್ನು ಸರ್ಕಾರದ ಅವಗಾಹನೆಗೆ ಸಲ್ಲಿಸಿರುತ್ತಾರೆ.

ವಿಷಯವನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕೂಲಕಂಷವಾಗಿ ಪರಿಶೀಲಿಸಿದ ನಂತರ ಕು: ಸಹನ, ಎಸ್, ಆದಿಚುಂಚನಗಿರಿ ಮೆಡಿಕಲ್ ಕಾಲೇಜು, ಬೆಳ್ಳೂರು ಇವರಿಗೆ ಪ್ರಥಮ ವರ್ಷದ ಎಂಬಿಬಿಎಸ್ ಕೋರ್ಸಿನ 2014–15ನೇ ಸಾಲಿನ ಬೋಧನಾ ಶುಲ್ಕವನ್ನು ವಿಳಂಬ ಮನ್ನಾ ಮಾಡಿ ಪ್ರಸಕ್ತ ಸಾಲಿನಲ್ಲಿ ಮರುಪಾವತಿಸಲು ಸರ್ಕಾರವು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 237 ಆರ್‌ಜಿಯು 2015, ಬೆಂಗಳೂರು, ದಿನಾಂಕ: 29.01.2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕು: ಸಹನ ಎಸ್, ಆದಿಚುಂಚನಗಿರಿ ಮೆಡಿಕಲ್ ಕಾಲೇಜು, ಬೆಳ್ಳೂರು ಇವರಿಗೆ ಪ್ರಥಮ ವರ್ಷದ ಎಂಬಿಬಿಎಸ್ ಕೋರ್ಸಿನ 2014–15ನೇ ಸಾಲಿನ ಬೋಧನಾ ಶುಲ್ಕವನ್ನು ಪ್ರಸಕ್ತ ಸಾಲಿನಲ್ಲಿ ಮರುಪಾವತಿಸಲು ಈ ಕೆಳಕಂಡ ಷರತ್ತಿಗೊಳಪಟ್ಟು, ವಿಳಂಬ ಮನ್ನಾ ಮಾಡಿ ಆದೇಶಿಸಿದೆ.

1) ವಿದ್ಯಾರ್ಥಿನಿಯು ಸರ್ಕಾರಿ ಕೋಟಾದಡಿಯಲ್ಲಿ ಪ್ರವೇಶ ಪಡೆದಿರಬೇಕು.
2) ವಿದ್ಯಾರ್ಥಿನಿಯ ಕುಟುಂಬ ವಾರ್ಷಿಕ ವರಮಾನ ₹.2.50 ಲಕ್ಷಕ್ಕಿಂತ ಅಧಿಕವಾಗಿರಬೇಕು.
3) ಕಾಲೇಜಿನಿಂದ ಹಾಜರಾತಿ ಹಾಗೂ ನಡತೆ ಪ್ರಮಾಣ ಪತ್ರ ಪಡೆದು ಸಲ್ಲಿಸಬೇಕು.
4) ವ್ಯಾಸಂಗ ಮುಗಿದ ನಂತರ ಸರ್ಕಾರಿ ಸೇವೆ ಸಲ್ಲಿಸುವ ಬಗ್ಗೆ ಬಂಧಪತ್ರ ನೀಡಿರುವ ಬಗ್ಗೆ ಖಚಿತ ಪಡಿಸಿಕೊಳ್ಳುವುದು.
5) ಕಾಲೇಜಿಗೆ ಪ್ರಥಮ ವರ್ಷಕ್ಕೆ ಸರ್ಕಾರ ನಿಗಧಿಪಡಿಸಿರುವ ದರದಲ್ಲಿ ಬೋಧನಾ ಶುಲ್ಕ ಪಾವತಿಸಿರುವ ಬಗ್ಗೆ ಖಚಿತಪಡಿಸಿಕೊಳ್ಳುವುದು.
6) ಸರ್ಕಾರಿ ಆದೇಶ ಸಂಖ್ಯೆ: ಆಕುಕ 407 ಎಂಪಿಎಸ್ 2006, ದಿನಾಂಕ: 25.03.2008 ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಆಕುಕ 101 ಆರ್‌ಜಿಯು 2012, ದಿನಾಂಕ: 10.05.2012ರಂತೆ, ಅಪೆಂಡಿಕ್ಸ್ 2(ಎ) 8(ಡಿ) ರನ್ವಯ, ಇವರಿಗೆ ನಿಗಧಿಪಡಿಸಿರುವ ಬೋಧನಾ ಶುಲ್ಕದ ಮೊತ್ತವನ್ನು ಮರುಪಾವತಿಸತಕ್ಕದ್ದು.
7) ವಿದ್ಯಾರ್ಥಿನಿಯವರು ಬೋಧನಾ ಶುಲ್ಕ ಮರುಪಾವತಿ ಸಂಬಂಧ ನೀಡಿರುವ ಮನವಿಪತ್ರದ ಮೂಲಪ್ರತಿಯನ್ನು ಪಡೆದು ಪರಿಶೀಲಿಸಿ, ನೀಡಿರುವ ಸ್ಪಷ್ಟೀಕರಣವು ನಿಯಮಾನುಸಾರ ಇರುವುದನ್ನು ಖಚಿತಪಡಿಸಿಕೊಳ್ಳತಕ್ಕದ್ದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಆಕುಕ 22 ಆಂಆಸ 2016, ದಿ: 08.01.2016ರ ಅಭಿಪ್ರಾಯದ ಮೇರೆಗೆ ಹೊರಡಿಸಲಾಗಿದೆ.

**PR. 148**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ಮುರಳಿ,**
ಸರ್ಕಾರದ ಅಧೀನ ಕಾರ್ಯದರ್ಶಿ–2 (ಪ್ರ),
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ. (ವೈದ್ಯಕೀಯ ಶಿಕ್ಷಣ)

## ಆರ್ಥಿಕ ಸಚಿವಾಲಯ

**ವಿಷಯ:** ಶ್ರೀ ರಮೇಶ್ ಅಪ್ಪಣ್ಣ ಮಾರಪ್ಪಗೋಳ್, ಪ್ರಥಮ ದರ್ಜೆ ಸಹಾಯಕರು, ಕರ್ನಾಟಕ ಸರ್ಕಾರಿ ವಿಮಾ ಇಲಾಖೆ, ಬೆಳಗಾವಿ ಇವರ ವಿರುದ್ಧ ಇಲಾಖಾ ವಿಚಾರಣೆ–ದಂಡನೆ ವಿಧಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಆಇ 67 ಕವಿಇ 2009, ದಿನಾಂಕ: 16.11.2009 ಮತ್ತು ತಿದ್ದುಪಡಿ ಸರ್ಕಾರಿ ಆದೇಶ ದಿನಾಂಕ: 21.12.2009.
2. ವಿಚಾರಣಾಧಿಕಾರಿಯಾಗಿ ನೇಮಕ ಮಾಡಿದ ಕರ್ನಾಟಕ ಉಪಲೋಕಾಯುಕ್ತ ಇವರ ಆದೇಶ ಸಂಖ್ಯೆ: LOK/INQ/14-A/38/2010, ದಿನಾಂಕ: 26.08.2010.
3. ಅಪರ ನಿಬಂಧಕರು, ವಿಚಾರಣೆಗಳೂ–4, ಅವರ ವಿಚಾರಣಾ ವರದಿ ದಿನಾಂಕ: 04.06.2015.
4. ಮಾನ್ಯ ಉಪಲೋಕಾಯುಕ್ತ–1ರವರ ಶಿಫಾರಸ್ಸು ಮಾಡಿದ ಪತ್ರ ಸಂಖ್ಯೆ: LOK/ARE-3/ENQ-38/2010, ದಿನಾಂಕ: 18.06.2015.
5. ಆಪಾದಿತ ನೌಕರರಿಗೆ ಎರಡನೇ ಕಾರಣ ಕೇಳುವ ನೋಟೀಸ್ ಜಾರಿ ಮಾಡಿದ ದಿನಾಂಕ: 21.07.2015.
6. ಎರಡನೇ ಕಾರಣ ಕೇಳುವ ನೋಟಿಸಿಗೆ ಆಪಾದಿತ ನೌಕರರು ಲಿಖಿತ ಉತ್ತರ ಸಲ್ಲಿಸಿದ ದಿನಾಂಕ: 31.08.2015.

**ಪ್ರಸ್ತಾವನೆ:**

ಶ್ರೀ ರಮೇಶ ಅಪ್ಪಣ್ಣ ಮಾರಪ್ಪಗೋಳ್, ಪ್ರಥಮ ದರ್ಜೆ ಸಹಾಯಕರು, ಕರ್ನಾಟಕ ಸರ್ಕಾರಿ ವಿಮಾ ಇಲಾಖೆ, ಬೆಳಗಾವಿ ಅವರು ಸೇವೆಯಲ್ಲಿದ್ದಾಗಲೇ ನಿಧನ ಹೊಂದಿದ ಪೊಲೀಸು ಇಲಾಖೆಯ ಬೆರಳಚ್ಚುಗಾರರಾಗಿದ್ದ ರಾಜಶೇಖರ ತಿಗಡಿ ಅವರ ಮೂರು ಸರ್ಕಾರಿ ವಿಮಾ ಪಾಲಿಸಿಗಳನ್ನು ಇತ್ಯರ್ಥಪಡಿಸಲು ಅಕ್ರಮ ಸಂಭಾವನೆಯನ್ನು ಬೇಡಿ ₹.3500/–ಗಳನ್ನು ಪಡೆದು ದಿನಾಂಕ: 01.12.2006ರಂದು ಲೋಕಾಯುಕ್ತ ಪೊಲೀಸರಿಗೆ ಸಿಕ್ಕಿಬಿದ್ದ ಆರೋಪಕ್ಕಾಗಿ ಅವರ ವಿರುದ್ಧ ಮೇಲೆ (1)ರಲ್ಲಿ ಓದಲಾದ ದಿನಾಂಕ: 11.11.2009ರ ಆದೇಶ ಹಾಗೂ 21.12.2009ರ ತಿದ್ದುಪಡಿ ಆದೇಶಗಳಲ್ಲಿ ಇಲಾಖಾ ವಿಚಾರಣೆಯನ್ನು ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 14–ಎರನ್ವಯ ಉಪ ಲೋಕಾಯುಕ್ತರಿಗೆ ವಹಿಸಲಾಯಿತು. ಅವರಿಂದ ಮೇಲೆ (2)ರಲ್ಲಿ ಓದಲಾದ ದಿನಾಂಕ: 26.08.2010ರ ಆದೇಶದಲ್ಲಿ ವಿಚಾರಣಾಧಿಕಾರಿಯಾಗಿ ನೇಮಕಗೊಂಡ ಅಪರ ನಿಬಂಧಕರು, ವಿಚಾರಣೆಗಳು–4 ಅವರ ಮೇಲೆ (3)ರಲ್ಲಿ ಓದಲಾದ ದಿನಾಂಕ: 04.06.2015ರ ವಿಚಾರಣಾ ವರದಿ ಸಲ್ಲಿಸಿ ಆರೋಪ ಕುರಿತು ಈ ಕೆಳಕಂಡ ನಿರ್ಣಯ ನೀಡಿದರು.

2. ಆರೋಪಿತ ನೌಕರರು ತಮ್ಮ ವಾದ ಮಂಡಿಸಿ ಫಿರ್ಯಾದುದಾರರು ತಮ್ಮನ್ನು ಭೇಟಿ ಮಾಡುವ ಅವಶ್ಯಕತೆಯೇ ಇರಲಿಲ್ಲ. ಅವರ ಕಡತವು 16.11.2008ರಂದೇ ತನ್ನ ನಿರ್ವಹಣೆಯ ನಂತರ ಸಲ್ಲಿಸಲ್ಪಟ್ಟಿತ್ತು ಎಂದು ತಿಳಿಸಿದ್ದಾರೆ. ಫಿರ್ಯಾದುದಾರರು ತಮ್ಮ ತಂದೆಯು ನಿಧನ ಹೊಂದಿದ್ದು ಅವರು ಹೊಂದಿದ್ದ 3 ವಿಮಾ ಪಾಲಿಸಿಗಳ ಪಾವತಿಗೆ 25.08.2006ರಂದು ಅರ್ಜಿ ಸಲ್ಲಿಸಿ ಬೆಳಗಾವಿಯ ಜಿಲ್ಲಾ ವಿಮಾ ಕಛೇರಿಗೆ ಹೋಗಿದ್ದು ಅಲ್ಲಿನ ಗುಮಾಸ್ತ ಗೋರಿಖಾನ್ ಎಂಬುವರ ಪ್ರೇರಣೆ ಮೇರೆಗೆ ಆರೋಪಿಗೆ ಹಣವನ್ನು ನೀಡಿದ್ದಾಗಿ ತಿಳಿಸಿದ್ದಾರೆ. ಇದೇ ಸಾಕ್ಷಿಯ ಸದರೀ ಗೋರಿಖಾನ್ ಗೂ ತನ್ನ 3 ವಿಮಾ ಪಾಲಿಸಿಗಳಿಗೂ ಯಾವುದೇ ಸಂಬಂಧ ಇಲ್ಲ. ಆರೋಪಿತರು ಸದರೀ ಪಾಲಿಸಿಗಳ ನಿರ್ವಾಹಕರಾಗಿದ್ದಾರೆ ಎಂದು ತಿಳಿಸಿದ್ದಾರೆ. ನಂತರ ಆರೋಪಿತರು ನಿರಾಕರಿಸಿದರೂ ಸಹ ತಾನು ಅವರ ಟೇಬಲ್ ಮೇಲೆ ಹಣ ಇಟ್ಟೆನೆಂದು ಪಾಟೀ ಸವಾಲಿನಲ್ಲಿ ತಿಳಿಸಿದ್ದಾರೆ. ವಾಸ್ತವರಾಗಿ ದೂರು ಅರ್ಜಿಯಲ್ಲಿ ಗೋರಿಖಾನ್ ಉಲ್ಲೇಖವೇ ಇಲ್ಲ. ವಿವಾದಕ್ಕೆ ಹೊರತಾದ ಅಂಶಗಳೆಂದರೆ ವಿಮಾ ಹಣ ಪಾವತಿಗೆ ದಿನಾಂಕ:25.08.2006ರಂದು ಅರ್ಜಿ ಸಲ್ಲಿಸಿದ್ದು, ಎರಡು ಮೂರು ಬಾರಿ ಕಛೇರಿಗೆ ಅಲೆದದ್ದು, ದಿನಾಂಕ: 30.11.2006ರ ವರೆಗೂ ವಿಮಾ ಹಣ ಪಾವತಿ ಆಗದೇ ಉಳಿದದ್ದು, ಒಂದು ಬಾರಿ ಆರೋಪಿತರು ಫಿರ್ಯಾದುದಾರರನ್ನು ಜಿಲ್ಲಾ ವಿಮಾಧಿಕಾರಿಯ ಬಳಿ ಕರೆದುಕೊಂಡು ಹೋಗಿದ್ದು, ಅವರು ಕೆಲಸ ಮಾಡುತ್ತೇವೆ ಎಂದು ಹೇಳಿದ್ದು, ಫಿರ್ಯಾಧಿ, ಸಾಕ್ಷಿಗಳು ವಿಚಾರಣೆ ಸಮಯದಲ್ಲಿ ಪ್ರತಿಕೂಲವಾಗಿ ವರ್ತಿಸಿದ್ದರೂ ಸಹ ಪ್ರಕರಣದ ಬೆಳವಣಿಗೆ, ಸನ್ನಿವೇಶಗಳು ವಿಮಾ ಹಣ ಇತ್ಯರ್ಥದಲ್ಲಿ ವಿಳಂಬ ಆಗಿರುವುದು, ಆ ವಿಳಂಬಕ್ಕೆ ಯಾವುದೇ ಸಮರ್ಪಕ ವಿವರಣೆ ಇಲ್ಲದಿರುವುದು, ಅಂತಿಮವಾಗಿ 01.12.2006ರಂದು ಟ್ರ್ಯಾಪ್ ನಡೆದು ಆರೋಪಿತರು ಸಿಕ್ಕಿ ಬಿದ್ದಿದ್ದು ನಡೆದಿದೆ, ಫಿರ್ಯಾದಿಯು ತನ್ನ ದೂರಿನಲ್ಲಿ ತಿಳಿಸಿದ ಅಂಶಗಳು ಹಾಗೂ ಟ್ರ್ಯಾಪ್ ನಂತರದ ಮಹಜರ್‌ಗೂ ತಾಳೆ ಹೊಂದುತ್ತಿದೆ. ಆರೋಪಿತರ ಬೆರಳುಗಳು ಹಾಗೂ ಜೇಬನ್ನು ತೊಳೆದಾಗ ಗುಲಾಬಿ ಬಣ್ಣಕ್ಕೆ ತಿರುಗಿದ ಬೆಳವಣಿಗೆ ಹಣ ಪಡೆದಿರುವುದನ್ನು ರುಜುವಾತುಪಡಿಸುತ್ತದೆ. ಅಕ್ರಮ ಸಂಭಾವನೆ ಪಡೆದಿರುವ ಆರೋಪ ಸಾಬೀತಾಗಿದೆ.

3. ಮೇಲಿನ ವಿಚಾರಣಾ ವರದಿಯನ್ನು ಪರಾಮರ್ಶಿಸಿದ ಉಪಲೋಕಾಯುಕ್ತರು ಮೇಲೆ (4)ರಲ್ಲಿ ಓದಲಾದ ದಿನಾಂಕ: 18.06.2015ರ ವರದಿ ಸಲ್ಲಿಸಿ ಸಾಬೀತಾದ ಆರೋಪಕ್ಕೆ ಅನುಗುಣವಾಗಿ ಶ್ರಿ ರಮೇಶ್ ಅಪ್ಪಣ್ಣ ಮಾರಪ್ಪಗೋಳ್, ಪ್ರಥಮ ದರ್ಜೆ ಸಹಾಯಕರಿಗೆ ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 8(VI)ರನ್ವಯ ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸುವ ದಂಡನೆ ವಿಧಿಸುವಂತೆ ಶಿಫಾರಸ್ಸು ಮಾಡಿದರು. ವಿಚಾರಣಾ ವರದಿ ಹಾಗೂ ಉಪಲೋಕಾಯುಕ್ತರ ಶಿಫಾರಸ್ಸುಗಳನ್ನು ಆರೋಪಿತರಿಗೆ ಮೇಲೆ (5)ರಲ್ಲಿ ಓದಲಾದ ದಿನಾಂಕ: 21.07.2015ರ ನೋಟೀಸ್ ಮೂಲಕ ನೀಡಿ ಅವುಗಳ ಕುರಿತು ಅಹವಾಲು ಸಲ್ಲಿಸಲು ಅವಕಾಶ ಕಲ್ಪಿಸಲಾಯಿತು. ಆರೋಪಿತರು ಮೇಲೆ (6)ರಲ್ಲಿ ಓದಲಾದ ದಿನಾಂಕ: 31.08.2015ರ ಉತ್ತರ ನೀಡಿ ಈ ವಿಚಾರಣೆಯಲ್ಲಿ ಒಂದನೇ ಸಾಕ್ಷಿಯಾದ ಫಿರ್ಯಾದುದಾರರು ಅವರ ಹೇಳಿಕೆಯಲ್ಲಿ ಎಲ್ಲಿಯೂ ಸಹ ನಾನು ಅಕ್ರಮ ಸಂಭಾವನೆಯನ್ನು ಬೇಡಿ ಪಡೆದಿರುವ ಕುರಿತು ಹೇಳಿರುವುದಿಲ್ಲ.

4. ಕ್ರಿಮಿನಲ್ ಮೊಕದ್ದಮೆಯಲ್ಲಿ ನನ್ನನ್ನು ಖುಲಾಸೆಗೊಳಿಸಲ್ಪಟ್ಟ ಸಾಕ್ಷಿಗಳ ಹೇಳಿಕೆಗಳ ಪೈಕಿ ಯಾವ ಸಾಕ್ಷಿ ನೀಡಿದ ಸಾಕ್ಷ್ಯ ಇಲಾಖಾ ವಿಚಾರಣೆಯಲ್ಲಿ ನನ್ನನ್ನು ದೋಷಿ ಎಂದು ಪರಿಗಣಿಸಲು ಪೂರಕವಾಗಿದೆ ಎಂಬ ಕುರಿತು ಯಾವ ಉಲ್ಲೇಖವು ಇಲ್ಲ. ಅತ್ಯಂತ ಸಂಕುಚಿತ ರೀತಿಯಲ್ಲಿ ಪ್ರಕರಣವನ್ನು ಪರಿಶೀಲಿಸಲಾಗಿದೆ. ಅಪ್ರಸ್ತುತವಾಗಿದ್ದರೂ ಸಹ ಕ್ರಿಮಿನಲ್ ಮೊಕದ್ದಮೆಯಲ್ಲಿನ ನೆರಳು ಸಾಕ್ಷಿಗಳು ಹಾಗೂ ಮಹಜರ್ ಸಾಕ್ಷಿಗಳನ್ನು ಇಲಾಖಾ ವಿಚಾರಣೆಯಲ್ಲಿ ಕರೆಸಿ ಅವರ ಹೇಳಿಕೆ ದಾಖಲಿಸಲಾಗಿದೆ. ಅದನ್ನು ಪರಿಗಣಿಸಿದ ರೀತಿ ಹಾಗೂ ಅದರ ಫಲಿತಾಂಶವಾದ ಆರೋಪ ಸಾಬೀತುಪಡಿಸುವಿಕೆಯು ಕಾನೂನಿಗೆ ವ್ಯತಿರಿಕ್ತವಾದುದಾಗಿದೆ. ರಾಸಾಯನಿಕ ವಿಶ್ಲೇಷಣೆಯೂ ಪ್ರಶ್ನಾರ್ಹವೇ ಆಗಿದೆ. ಪ್ರಕರಣದಲ್ಲಿ ನಾನು ನನ್ನ ಪಾಲಿನ ಕರ್ತವ್ಯ ಪೂರೈಸಿದ ದಿನಾಂಕಕ್ಕೆ (16.11.2006) ವಿಚಾರಣಾಧಿಕಾರಿಗಳು ತುಸು ಹೆಚ್ಚಿನ ಒತ್ತುಕೊಟ್ಟು ಪ್ರಕರಣವನ್ನು ಪರಿಗಣಿಸಿದ್ದಲ್ಲಿ ಆರೋಪ ಸಾಬೀತಾಗಲು ಸಾಧ್ಯವಿರಲಿಲ್ಲ.

5. ಅದರಲ್ಲೂ ವಿಶೇಷವಾಗಿ ಗೋರಿಖಾನ್ ಎಂಬ ವ್ಯಕ್ತಿ ಅಪ್ರಸ್ತುತ ಎನ್ನುವ ವಿಚಾರಣಾಧಿಕಾರಿಯ ನಿಲುವು ಅರ್ಥಹೀನವಾದುದಾಗಿದೆ. 1ನೇ ಸಾಕ್ಷಿಯು ಈ ಬಗ್ಗೆ ನುಡಿದ ಸಾಕ್ಷ್ಯವನ್ನು ಪರಿಗಣಿಸದೇ ಇರಲು ವಿಚಾರಣಾಧಿಕಾರಿಗೆ ಕಾರಣಗಳೇ ಇರಲಿಲ್ಲ. ಕೇವಲ ನನ್ನ ಒತ್ತಾಯದ ಮೇರೆಗೆ ಹಣವನ್ನು ನೀಡಲಾಗಿದೆ ಎಂದು ಸಾಬೀತುಪಡಿಸಬೇಕೆಂಬ ಉದ್ದೇಶದಿಂದಲೇ ಅಪ್ರಸ್ತುತತೆಯನ್ನು ಎಳೆದು ತರಲಾಗಿದೆ. ಅಕ್ರಮ ಸಂಭಾವನೆ ಸ್ವೀಕರಿಸಲು ನಾನು ಒಪ್ಪದೇ ಅದನ್ನು ಟೇಬಲ್‌ನಿಂದ ತಳ್ಳಿದೆ ಎಂದು ಒಂದನೇ ಸಾಕ್ಷಿಯು ಹೇಳಿಕೆ ನೀಡಿದಾಗ್ಯೂ ಸಹ ಅದನ್ನು ಪರಿಗಣಿಸದೇ ನೀಡಿರುವ ವರದಿ ಆಧಾರದ ಮೇಲೆ ದಂಡನೆ ವಿಧಿಸುವುದು ನ್ಯಾಯ ಸಮ್ಮತವಾಗುವುದಿಲ್ಲ.

6. ಮೂರನೇ ಸಾಕ್ಷಿಯು ಪ್ರತಿಕೂಲವಾಗಿದ್ದರೂ ಸಹ ಪಾಟೀ ಸವಾಲಿನಲ್ಲಿ ಆತ ನೀಡಿದ ಹೇಳಿಕೆಗಳನ್ನು ಸಕಾರಾತ್ಮಕವಾಗಿ ಪರಿಗಣಿಸಲಾಗಿದೆ. ನಾಲ್ಕನೇ ಸಾಕ್ಷಿಯಾಗಿ ಹೇಳಿಕೆ ನೀಡಿದ ತನಿಖಾಧಿಕಾರಿಯು ಈ ಬಗೆಗಿನ ಕಡತವನ್ನು ಟ್ರ್ಯಾಪ್ ನಡೆದ 15 ದಿನಕ್ಕೆ ಮೊದಲೇ ನಾನು ಮೇಲಾಧಿಕಾರಿಗಳಿಗೆ ಸಲ್ಲಿಸಿದ್ದೆನು. ಅದು ನನ್ನ ಬಳಿ ಇರಲಿಲ್ಲ ಎಂದು ಸಾಕ್ಷ್ಯ ನುಡಿದಿದ್ದಾರೆ. ಕ್ರಮಬದ್ಧ ಕಲಾಪ, ವಾದ ಪ್ರತಿವಾದದಿಂದ ಕೂಡಿದ ವಿವರವಾದ ವಿಚಾರಣೆಯ ನಂತರ ಕ್ರಿಮಿನಲ್ ಮೊಕದ್ದಮೆಯಲ್ಲಿ ನನ್ನನ್ನು ನಿರ್ದೋಷಿ ಎಂದು ಘೋಷಿಸಿರುವಾಗ ಇಲಾಖಾ ವಿಚಾರಣೆಯಲ್ಲಿ ಆರೋಪ ಸಾಬೀತಾಗುವುದೆಂಬ ಸಾಕ್ಷಿಗಳ ಹೇಳಿಕೆಯನ್ನಾಧರಿಸಿ ನನ್ನ ವಿರುದ್ಧ ಆರೋಪ ಸಾಬೀತಾಗಿದೆ ಎಂಬ ನಿರ್ಣಯ ನೀಡುವುದು ನ್ಯಾಯಕ್ಕೆ ವಿರುದ್ಧವಾದ ಕ್ರಮವಾಗುತ್ತದೆ.

7. ಪ್ರಶ್ನಿತ ಪಾಲಿಸಿಗಳಿಗೆ ಸಂಬಂಧಿಸಿದ ಕಡತವನ್ನು ನಾನು ನನ್ನ ಪಾಲಿನ ಕೆಲಸದ ನಂತರ ದಿನಾಂಕ: 16.11.2006ರಂದೇ ಮೇಲಾಧಿಕಾರಿಗೆ ಸಲ್ಲಿಸಿದ್ದೆ ಎಂದು ಒಂದು ಮತ್ತು ನಾಲ್ಕನೇ ಸಾಕ್ಷಿಗಳು ವಿಚಾರಣೆ ಸಮಯದಲ್ಲಿ ಹೇಳಿದ್ದಾರೆ. ಅದರಲ್ಲೂ ನಾಲ್ಕನೇ ಸಾಕ್ಷಿಯು ತನಿಖೆಯ ಸಲುವಾಗಿ ಕಡತವನ್ನು ಜಿಲ್ಲಾ ವಿಮಾಧಿಕಾರಿಯಿಂದ ವಶಪಡಿಸಿಕೊಳ್ಳಲಾಯಿತೆಂದು ಸ್ಪಷ್ಟವಾಗಿ ನುಡಿದಿದ್ದಾರೆ. ಹೀಗಿದ್ದೂ ಸಹ ವಿಚಾರಣಾಧಿಕಾರಿಯವರು ದಿನಾಂಕ: 16.11.2006ರ ನಂತರ ಕಡತವು ನನ್ನಲ್ಲಿರಲಿಲ್ಲ ಎಂಬುದನ್ನು ಸಾಬೀತುಪಡಿಸಲು ನಾನು ವಿಫಲನಾಗಿದ್ದೇನೆಂದು ನಿರ್ಣಯಿಸಿರುವುದು ಸಾಕ್ಷ್ಯದ ಸೂಕ್ತ ವಿಶ್ಲೇಷಣೆ ಮಾಡದೇ ಇರುವ ಕಾರಣದಿಂದಾಗಿದೆ.

8. ನನಗೆ ನೀಡಲಾದ 2ನೇ ಕಾರಣ ಕೇಳುವ ನೋಟೀಸ್ ಸಹ ಕಾನೂನಿಗೆ ವಿರುದ್ಧವಾಗಿದ್ದು, ಕಾನೂನಿನಲ್ಲಿ ನಿಗಧಿಪಡಿಸಿರುವ ರೀತಿಯಲ್ಲಿ ಅದು ಇರುವುದಿಲ್ಲ. ಕಾರ್ಯವಿಧಾನದಂತೆ ನಿಯಮಾನುಸಾರ ವಿಧಿಸಲಾಗುವ ದಂಡನೆಯನ್ನು 2ನೇ ನೋಟಿಸ್‌ನಲ್ಲಿ ತಿಳಿಸಿರಬೇಕು. ವಿಚಾರಣಾಧಿಕಾರಿಗಳ ನಿರ್ಣಯವನ್ನು ನೋಟೀಸ್‌ನಲ್ಲಿ ವಿವರವಾಗಿ ದಾಖಲಿಸಬೇಕು. ಇಲ್ಲಿ ಅವುಗಳನ್ನು ಪಾಲಿಸಿಲ್ಲ. ಅದರಲ್ಲೂ ದಿನಾಂಕ: 16.11.2006ರಂದೇ ಕಡತ ಸಲ್ಲಿಸಿರುವುದನ್ನು ನಾನು ಮುಚ್ಚಿಟ್ಟು ಹಣಕ್ಕೆ ಬೇಡಿಕೆ ಇಟ್ಟು ದೂರು ನೀಡಲು ಕಾರಣವಾದೆ, ನನ್ನ ಎರಡೂ ಕೈಗಳು, ಷರಟಿನ ಎಡ ಜೇಬಿನ ತೊಳೆಯುವಿಕೆಯನ್ನು ಅದರ ಫಲಿತಾಂಶದೊಡನೆ ಆಧರಿಸಿ ತಳೆದ ವಿಚಾರಣಾಧಿಕಾರಿಗಳ ನಿಲುವು ಕಲ್ಪನೆಯಿಂದ ಕೂಡಿದ್ದಾಗಿದೆ. ಈ ಎಲ್ಲ ಕಾರಣಗಳಿಂದಾಗಿ ತಮ್ಮನ್ನು ಆರೋಪ ಮುಕ್ತರನ್ನಾಗಿಸುವಂತೆ ಕೋರಿದ್ದಾರೆ.

9. ಆರೋಪಿತರ ಉತ್ತರವನ್ನು ಪರಿಶೀಲಿಸಲಾಗಿದೆ. ಈ ಪ್ರಕರಣದಲ್ಲಿನ ಎಲ್ಲ ಸಾಕ್ಷಿಗಳ ಹೇಳಿಕೆಯೂ ಆರೋಪಿತರ ಸುತ್ತಲೂ ಕೇಂದ್ರಿಕೃತವಾಗಿವೆ. ಗೋರಿಖಾನ್ ಹೆಸರು ಒಂದನೇ ಸಾಕ್ಷಿಯ ಹೇಳಿಕೆಯಲ್ಲಿ ಪ್ರಸ್ತಾಪಿಸಲ್ಪಟ್ಟಿದ್ದರೂ ಸಹ ಅದು ಆರೋಪಿಯನ್ನು ಪರಿಚಯ ಮಾಡುವುದಕ್ಕಷ್ಟೇ ಸೀಮಿತಗೊಂಡಿದೆ. ದೂರಿನಲ್ಲಾಗಲೀ, ಟ್ರ್ಯಾಪ್ ಸಮಯದಲ್ಲಾಗಲೀ ಇತರ ಸಾಕ್ಷಿಗಳ ಹೇಳಿಕೆಯಲ್ಲಾಗಲೀ ಗೋರಿಖಾನ್ ಪ್ರಸ್ತಾಪ ಆಗುವುದೇ ಇಲ್ಲ. ಹೀಗಾಗಿ ಆ ಹೆಸರು irrelevant ಎಂಬ ವಿಚಾರಣಾಧಿಕಾರಿಗಳ ನಿಲುವು ಸೂಕ್ತವಾದುದಾಗಿದೆ. ಒಂದನೇ ಸಾಕ್ಷಿಯಾದ ಫಿರ್ಯಾಧಿಯ ನೀಡಿದ ಹೇಳಿಕೆಯಲ್ಲಿ ಒಂದು ಬಾರಿ ಜಿಲ್ಲಾ ವಿಮಾಧಿಕಾರಿಯನ್ನು ನೋಡಿದ್ದು ಬಿಟ್ಟಲ್ಲಿ ಉಳಿದ ಎಲ್ಲ ಸಂಪರ್ಕಗಳನ್ನೂ ಫಿರ್ಯಾದಿಯು ಆರೋಪಿತರೊಡನೆಯೇ ಹೊಂದಿದ್ದಾರೆ. ಇದು ಅರ್ಜಿ ಸಲ್ಲಿಸಿದ ದಿನಾಂಕ: 26.08.2006 ರಿಂದ ಟ್ರ್ಯಾಪ್ ನಡೆಸಲ್ಪಟ್ಟ ದಿನಾಂಕ: 01.12.2006 ರವರೆಗೂ ಮುಂದುವರಿದಿದೆ. ಇದಕ್ಕೆ ಪೂರಕವಾಗಿ ಎಲ್ಲಾ 4 ಮಂದಿ ಸಾಕ್ಷಿಗಳ ಹೇಳಿಕೆಗಳು ನುಡಿಯಲ್ಪಟ್ಟಿವೆ. ಇವೇ ಸಾಕ್ಷಿ, ಸಾಕ್ಷ್ಯ ಸನ್ನಿವೇಶಗಳಾಗಿವೆ.

10. ಇಲಾಖಾ ವಿಚಾರಣೆಗೆ ಮೂಲವಾದ ತನಿಖಾ ವರದಿಯಲ್ಲಿನ ದಾಖಲೆಗಳು, ಕಾಗದ ಪತ್ರಗಳು, ಸಾಕ್ಷಿಗಳಾಗಿ ನೀಡಿದ ಹೇಳಿಕೆ ಆಧರಿಸಿ ಸಾಕ್ಷಿಗಳನ್ನು ಹೆಸರಿಸಿ ಅವರುಗಳ ವಿಚಾರಣೆ ನಡೆಸಲಾಗಿದೆ. ಅದರಂತೆಯೇ ಇಲಾಖಾ ವಿಚಾರಣೆಯಲ್ಲಿ ಪೂರಕವಾದ ಸಾಕ್ಷಿಗಳನ್ನಾಗಿ ಫಿರ್ಯಾದಿ, ಇಬ್ಬರು ಸಾಕ್ಷಿದಾರರು, ತನಿಖಾಧಿಕಾರಿಗಳು ನೀಡಿದ ಸಾಕ್ಷ್ಯಗಳ ವಿಶ್ಲೇಷಣೆಯು ಇಲ್ಲಿ ಪರಿಗಣಿಸಲ್ಪಟ್ಟಿದೆ. ಇದರಲ್ಲಿ ಯಾವುದೇ ಕಾನೂನಿನ ಉಲ್ಲಂಘನೆ ಇರುವುದಿಲ್ಲ. ಈಗಾಗಲೇ ಹಿಂದೆ ಚರ್ಚಿಸಿದಂತೆ ಗೋರಿಖಾನ್ ಪಾತ್ರವು ಕೇವಲ ಆರೋಪಿತರ ಪರಿಚಯ ಮಾಡಿಕೊಡುವುದಕ್ಕಷ್ಟೇ ಸೀಮಿತವಾಗಿರುವುದು ವಿಶ್ಲೇಷಣೆಯಿಂದ ಕಂಡು ಬರುತ್ತದೆ. ಆದ್ದರಿಂದ ಗೋರಿಖಾನ್ ಎಂಬ ವ್ಯಕ್ತಿಯ ಹೆಸರನ್ನು ಬಲವಂತವಾಗಿ ತರಲಾಗಿದೆ. ನಾಲ್ಕನೇ ಸಾಕ್ಷಿಯಾಗಿ ತನಿಖಾಧಿಕಾರಿಯು ಹೇಳುವ ಹೇಳಿಕೆಯ ಹೊರತಾಗಿಯೂ ಈ ಪ್ರಕರಣದಲ್ಲಿ ಪ್ರಧಾನವಾಗಿ ಪರಿಗಣಿಸಬೇಕಾದ ಅಂಶವೆಂದರೆ ನಿಧನ ಹೊಂದಿದ ವ್ಯಕ್ತಿಯ ವಿಮಾ ಕ್ಲೇಮನ್ನು ದಿನಾಂಕ: 26.08.2006ರಂದು ಸಲ್ಲಿಸಿದರೂ ಅದು ದಿನಾಂಕ: 01.12.2006ರಂದೂ ಇತ್ಯರ್ಥಗೊಂಡಿರಲಿಲ್ಲ ಎಂಬುದು ನಿಜವಾದ ಅಂಶ.

11. ಆರೋಪಿತರೇ ಒಪ್ಪುವಂತೆ ದಿನಾಂಕ: 16.11.2006ರಂದು ಅವರು ಕಡತವನ್ನು ಮೇಲಕ್ಕೆ ಒಪ್ಪಿಸಿದ್ದಾಗಿ ತಿಳಿಸುತ್ತಾರೆ. ದಿನಾಂಕ: 30.11.2006 ರಂದೂ ಸಹ ಯಾವುದೇ ಇತ್ಯರ್ಥ ಕಾಣದೇ ಲೋಕಾಯುಕ್ತದಲ್ಲಿ ದೂರು ದಾಖಲಾಗಿದೆ. ದಿನಾಂಕ: 01.12.2006ರಂದು ಆರೋಪಿತರು ಅಕ್ರಮ ಸಂಭಾವನೆ ಪಡೆದು ಸಿಕ್ಕಿ ಬಿದ್ದಿದ್ದಾರೆ. ಒಂದು ವೇಳೆ ಗೋರಿಖಾನ್ ಎಂಬುವರು ಇದರಲ್ಲಿ ಇದ್ದಲ್ಲಿ ಅವರ ಬಗ್ಗೆ ದೂರು ಅರ್ಜಿಯಲ್ಲಾಗಲೀ, ಮಹಜರ್ ವರದಿಯಲ್ಲಾಗಲೀ ಅವರ ಹೆಸರು ಪ್ರಸ್ತಾಪ ಆಗಬೇಕಿತ್ತು. ಆದರೆ ಆಗಿಲ್ಲ. ಕೇವಲ ಆರೋಪಿತರ ಪ್ರಸ್ತಾಪ ಪೂರ್ತಾ ಮುಂದುವರಿದುಕೊಂಡು ಬಂದಿದೆ. ವಾಸ್ತವಾಂಶ ಹೀಗಿರುವಲ್ಲಿ ನನ್ನ ಒತ್ತಾಯದ ಮೇರೆಗೆ ಜೇಬಿನಲ್ಲಿ ಹಣ ಇಡಲಾಯಿತು ಎಂಬುದನ್ನು ಸಾಬೀತುಪಡಿಸುವ ಉದ್ದೇಶವನ್ನು ವಿಚಾರಣಾಧಿಕಾರಿಗಳು ಹೊಂದಿದ್ದರೆಂಬ ಆರೋಪಿತರ ಅಹವಾಲನ್ನು ಅಂಗೀಕರಿಸುವುದು ಸಾಧ್ಯವಿಲ್ಲ.

12. ಇನ್ನು ತಮಗೆ ನೀಡಲಾದ ಎರಡನೇ ನೋಟೀಸ್‌ನ ಕಾನೂನು ಸಂಬಂಧೀ ಅಂಶ ಕುರಿತು ಆರೋಪಿತ ನೌಕರರು ಎತ್ತಿರುವ ಆಕ್ಷೇಪಣೆ ಬಗ್ಗೆ ಹೇಳುವುದಾದರೆ ಅವರು ಉಲ್ಲೇಖಿಸಿರುವ ಎಸ್ ಡೇವಿಡ್ ವರ್ಸಸ್ ಸ್ಟೇಟ್ ಆಫ್ ಮೈಸೂರು, 1963ರ ಪ್ರಕರಣ ಆಗಿದ್ದರೆ, ಜೆ. ಐಸಾಕ್ ವರ್ಸಸ್ ಡೈರೆಕ್ಟರ್ ಕೊಲೆಜಿಯೇಟ್ ಎಜುಕೇಷನ್ ಪ್ರಕರಣವು ಆಫ್ 1966ರಷ್ಟು ಹಿಂದಿನದಾಗಿದೆ. ಇದರ ನಂತರದಲ್ಲಿ ತುಳಸೀರಾಮ್ ಪಟೇಲ್ ವರ್ಸಸ್ ಯೂನಿಯನ್ ಆಫ್ ಇಂಡಿಯಾ (1983) ಹಾಗೂ ಯೂನಿಯನ್ ಆಫ್ ಇಂಡಿಯಾ ವರ್ಸಸ್ ಮೊಹ್ಮದ್ ರಂಜಾನ್ ಖಾನ್ ಪ್ರಕರಣಗಳಲ್ಲಿ ನೀಡಲಾದ ತೀರ್ಪುಗಳಂತೆ ಉದ್ದೇಶಿತ ದಂಡನೆ ಕುರಿತು ಅಹವಾಲು ಸಲ್ಲಿಸಲು ಆರೋಪಿತ ಸರ್ಕಾರಿ ನೌಕರನಿಗೆ ಅವಕಾಶ ನೀಡುವ ಅವಶ್ಯಕತೆ ಇಲ್ಲ. ಆದರೆ ವಿಚಾರಣಾ ವರದಿಯ ಕುರಿತು ಅಹವಾಲು ಸಲ್ಲಿಸಲು ಅವಕಾಶ ಕಲ್ಪಿಸಬೇಕೆಂದು ನಿರ್ಣಯವಾಗಿದ್ದು ಇದನ್ನನುಸರಿಸಿ ಸುತ್ತೋಲೆ ಸಂಖ್ಯೆ: ಸಿಆಸುಇ 12 ಸೇಇವಿ 94, ದಿನಾಂಕ: 07.12.1994ರಲ್ಲಿಸೂಚನೆಗಳನ್ನು ನೀಡಲಾಗಿದೆ. ಅದರನ್ವಯ ಇವರಿಗೆ ವಿಚಾರಣಾ ವರದಿ ಮತ್ತು ಉಪ ಲೋಕಾಯುಕ್ತರ ಶಿಫಾರಸ್ಸಿನೊಡನೆ ದಿನಾಂಕ: 21.07.2015ರ 2ನೇ ಕಾರಣ ಕೇಳುವ ನೋಟಿಸ್ ನೀಡಲಾಗಿದೆ. ಆದ್ದರಿಂದ ತನಗೆ ವಿಧಿಸಲಾಗುವ ದಂಡನೆಯನ್ನು ತಿಳಿಸಬೇಕೆಂಬ ಅಹವಾಲನ್ನು ಒಪ್ಪಲು ಆಗುವುದಿಲ್ಲ.

13. ಈ ಎಲ್ಲ ಅಂಶಗಳ ಹಿನ್ನೆಲೆಯಲ್ಲಿ ಆರೋಪಿತರ ಅಹವಾಲನ್ನು ಒಪ್ಪದೇ ಆರೋಪಗಳು ಸಾಬೀತಾಗಿವೆ ಎಂಬ ವಿಚಾರಣಾಧಿಕಾರಿಗಳ ನಿರ್ಣಯ ಹಾಗೂ ಉಪಲೋಕಾಯುಕ್ತರ ಶಿಫಾರಸ್ಸನ್ನು ಒಪ್ಪಿಕೊಂಡ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಆಇ 67 ಕವಿಇ 2009, ಬೆಂಗಳೂರು, ದಿನಾಂಕ: 21.10.2015.**

ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 11, 11ಎ ಮತ್ತು 14ಎ ರೊಡನೆ ಓದಿಕೊಂಡಂತೆ ಅದೇ ನಿಯಮಾವಳಿಯ ನಿಯಮ 8(vi) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿದ ಸರ್ಕಾರವು ರಮೇಶ ಅಪ್ಪಣ್ಣ ಮಾರಪ್ಪಗೋಳ್, ಪ್ರಥಮ ದರ್ಜೆ ಸಹಾಯಕರು, ಕರ್ನಾಟಕ ಸರ್ಕಾರಿ ವಿಮಾ ಇಲಾಖೆ, ಬೆಳಗಾವಿ ಅವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸುತ್ತದೆ.

PR. 116

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎನ್. ಲಕ್ಷ್ಮಣ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ. (ಆಡಳಿತ & ಮುಂಗಡ)

## ಆರ್ಥಿಕ ಸಚಿವಾಲಯ

**ವಿಷಯ :** ಚಲನ ವೈಕಲ್ಯ ಹೊಂದಿರುವ ಮಕ್ಕಳಿರುವ ಸರ್ಕಾರಿ ನೌಕರರಿಗೆ ಪೋಷಣಾ ಭತ್ಯೆಯ ಸೌಲಭ್ಯವನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 12 ಎಸ್‌ಆರ್‌ಪಿ 2012, (XII), ದಿನಾಂಕ: 10.06.2013.

**ಪ್ರಸ್ತಾವನೆ:**

2011ರ ಅಧಿಕಾರಿ ವೇತನ ಸಮಿತಿಯ ಶಿಫಾರಸ್ಸಿನನ್ವಯ ಮೇಲೆ ಓದಲಾದ ಸರ್ಕಾರದ ಆದೇಶದಲ್ಲಿ ಚಲನ ವೈಕಲ್ಯತೆ ಮತ್ತು ಅಂಗವಿಕಲತೆಯಿಂದಾಗಿ ಮನೆಯಲ್ಲಿಯೇ ಉಳಿದುಕೊಳ್ಳುವ ಹಾಗೂ ಶಾಲೆಗಳಿಗೆ ಹೋಗಲು ಅಸಮರ್ಥರಾಗಿ ಪೋಷಕರ ಮೇಲೆ ಸಂಪೂರ್ಣವಾಗಿ ಅವಲಂಬಿತರಾಗಿರುವ ಸರ್ಕಾರಿ ನೌಕರರ ಮಕ್ಕಳ ಪಾಲನೆ/ಪೋಷಣೆ ಮಾಡುವುದಕ್ಕಾಗಿ ಒಂದು ಮಗುವಿಗೆ ಮಾಸಿಕ ತಲಾ ₹.500/–ಗಳ ದರದಲ್ಲಿ ಗರಿಷ್ಠ 2 ಮಕ್ಕಳಿಗೆ ಮಾತ್ರ ಪೋಷಣಾ ಭತ್ಯೆಯನ್ನು ಮಂಜೂರು ಮಾಡಲಾಗಿದೆ.

ಮೇಲೆ ಓದಲಾದ ಆದೇಶದನ್ವಯ "Autism, Cerebral Palsy or Mental retardation" ಹೊಂದಿರುವ ಮಕ್ಕಳ ಪೋಷಣೆಗೆ ಸರ್ಕಾರಿ ನೌಕರರಿಗೆ ಪೋಷಣಾ ಭತ್ಯೆಯನ್ನು ನೀಡಬಹುದೇ ಎಂಬ ಬಗ್ಗೆ ಹಲವು ಇಲಾಖೆಗಳು ಸರ್ಕಾರದ ಸ್ಪಷ್ಟೀಕರಣವನ್ನು ಕೋರಿರುತ್ತವೆ. ಅದನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಎಸ್‌ಆರ್‌ಪಿ 2016, ಬೆಂಗಳೂರು, ದಿನಾಂಕ: 19.01.2016.**

ದಿನಾಂಕ: 10.06.2013ರ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 12 ಎಸ್‌ಆರ್‌ಪಿ 2012 (XII) ರಡಿಯಲ್ಲಿನ ಪೋಷಣಾ ಭತ್ಯೆಯ ಸೌಲಭ್ಯವು " Autism Cerebral Palsy or Mental retardation"ಈ ವೈಕಲ್ಯತೆ/ಸಮಸ್ಯೆಗಳಿಂದ ಬಳಲುತ್ತಿದ್ದು, ಶಾಲೆಗಳಿಗೆ ಹೋಗಲು ಅಸಮರ್ಥರಾಗಿ ಪೋಷಕರ ಮೇಲೆ ಸಂಪೂರ್ಣವಾಗಿ ಅವಲಂಬಿತರಾಗಿರುವ ಸರ್ಕಾರಿ ನೌಕರರ ವಿಶೇಷ ಮಕ್ಕಳ ಪೋಷಣೆಗೆ ಅನ್ವಯವಾಗುತ್ತದೆ ಎಂದು ಈ ಮೂಲಕ ಆದೇಶಿಸಿದೆ.

ಉಳಿದಂತೆ, ಪೋಷಣಾ ಭತ್ಯೆಯನ್ನು ನೀಡಲು ವಿಧಿಸಿರುವ ಇತರೆ ಷರತ್ತುಗಳು ಮುಂದುವರೆದು ಅನ್ವಯವಾಗುತ್ತವೆ.

PR. 108
SC.50

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ಎಸ್. ರಾಜಲಕ್ಷ್ಮಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಆರ್ಥಿಕ ಇಲಾಖೆ. (ಸೇವೆಗಳು–2)

## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

**ವಿಷಯ :** ಮಂಗಳೂರು ಅಂತರಾಷ್ಟ್ರೀಯ ವಿಮಾನ ನಿಲ್ದಾಣದ ಮೊದಲನೇ ಹಂತದ ಅಭಿವೃದ್ಧಿಗಾಗಿ ಕಂದಾಯ ಇಲಾಖೆಯಿಂದ ಸ್ವಾಧೀನ ಪಡಿಸಿದ ಜಮೀನಿಗೆ ಸಂಬಂಧಿಸಿದಂತೆ ನ್ಯಾಯಾಲಯದ ಪ್ರಕರಣಗಳಲ್ಲಿ ನ್ಯಾಯಾಲಯದ ತೀರ್ಪಿನಂತೆ ಹೆಚ್ಚುವರಿ ಪರಿಹಾರ ವಿತರಿಸಲು ಕಂದಾಯ ಇಲಾಖೆಗೆ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಕಂದಾಯ ಇಲಾಖೆಯ ಕಡತ ಸಂಖ್ಯೆ: ಕಂಇ/12/ಭೂಸ್ವಾನಾ/2013.
2. ಜಿಲ್ಲಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ಪತ್ರ ಸಂಖ್ಯೆ: ಅಸಪ:ಸಂ. ಎಲ್ ಎಕ್ಯೂ.ಇತರೆ ಸಿಆರ್ 20/2014–15/ 129594/ಬಿ1. ದಿನಾಂಕ: 17.10.2015.
3. ಸರ್ಕಾರದ ಅಧೀನ ಕಾರ್ಯದರ್ಶಿ ಆರ್ಥಿಕ ಇಲಾಖೆ (ವೆಚ್ಚ 7&8) ಇವರ ಆ.ಟಿ.ಸಂಖ್ಯೆ: ಆ.ಇ. 952 ವೆಚ್ಚ–7/ 2015, ದಿನಾಂಕ: 19.11.2015.
4. ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 74 ಬಿಆರ್‌ಎಸ್ 2015, ದಿನಾಂಕ: 08.01.2016.

**ಪ್ರಸ್ತಾವನೆ:**

1. ಮಂಗಳೂರು ವಿಮಾನ ನಿಲ್ದಾಣದ ಮೊದಲನೇ ಹಂತದ ಅಭಿವೃದ್ಧಿಯನ್ನು ಕಂದಾಯ ಇಲಾಖೆಯಿಂದ ಕೈಗೊಂಡಿದ್ದು, ಅಭಿವೃದ್ಧಿಗಾಗಿ ಭೂಸ್ವಾಧೀನಪಡಿಸಿದ ಜಮೀನಿಗೆ ಸಂಬಂಧಿಸಿದಂತೆ ಮೇಲೆ ಓದಲಾದ ಕ್ರಮ ಸಂ. (1)ರಲ್ಲಿ ಹೆಚ್ಚುವರಿ ಪರಿಹಾರಕ್ಕಾಗಿ ನ್ಯಾಯಾಲಯದಲ್ಲಿ ಪ್ರಕರಣಗಳು ದಾಖಲಾಗಿದ್ದು, ನ್ಯಾಯಾಲಯದ ತೀರ್ಪಿನನ್ವಯ ಹೆಚ್ಚುವರಿ ಪರಿಹಾರವನ್ನು ಬಿಡುಗಡೆಗೊಳಿಸಲು ಕಂದಾಯ ಇಲಾಖೆಯಲ್ಲಿ ಅನುದಾನ ಲಭ್ಯವಿಲ್ಲದ ಕಾರಣ ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಯಿಂದ ಅನುದಾನ ಕೋರಿ ಕಂದಾಯ ಇಲಾಖೆಯಿಂದ ಪ್ರಸ್ತಾವನೆ ಸ್ವೀಕೃತವಾಗಿರುತ್ತದೆ. ಸದರಿ ಕಡತವನ್ನು ಪರಿಶೀಲಿಸಲಾಗಿ ಮಂಗಳೂರು ವಿಮಾನ ನಿಲ್ದಾಣದ ಮೊದಲನೇ ಹಂತದ ವಿಸ್ತರಣೆಗಾಗಿ ಕಂದಾಯ ಇಲಾಖೆಯಿಂದ ಭೂಸ್ವಾಧೀನ ಪಡಿಸಿದ ಜಮೀನಿನ ಭೂ ಮಾಲೀಕರು ಹೆಚ್ಚುವರಿ ಪರಿಹಾರ ಕೋರಿ ನ್ಯಾಯಾಲಯದಲ್ಲಿ ಮೊಕದ್ದಮೆಗಳನ್ನು ದಾಖಲಿಸಿರುವುದು ಕಂಡುಬಂದಿದ್ದು, ನ್ಯಾಯಾಲಯದ ಆದೇಶದಂತೆ ಭೂಮಾಲೀಕರಿಗೆ ಹೆಚ್ಚುವರಿ ಪರಿಹಾರ ನೀಡಬೇಕಾಗಿದ್ದು, ಒಟ್ಟು 77 ಪ್ರಕರಣಗಳಲ್ಲಿ ₹.34,81,96,285/–ಗಳ ಅವಶ್ಯವಿದೆ ಎಂದು ತಿಳಿಸಿರುತ್ತಾರೆ. ಈ ಬಗ್ಗೆ ಜಿಲ್ಲಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರು ಉಲ್ಲೇಖ (2)ರ ಪತ್ರದಲ್ಲಿ ವರದಿ ಮಾಡಿರುತ್ತಾರೆ.

2. ಮಂಗಳೂರು ವಿಮಾನ ನಿಲ್ದಾಣದ ಭೂಸ್ವಾಧೀನಕ್ಕೆ ಸಂಬಂಧಿಸಿದಂತೆ ನ್ಯಾಯಾಲಯದಲ್ಲಿ ದಾಖಲಾದ ಪ್ರಕರಣಗಳಿಗೆ ನ್ಯಾಯಾಲಯದ ತೀರ್ಪಿನಂತೆ ಹೆಚ್ಚುವರಿ ಪರಿಹಾರಧನ ಪಾವತಿಸುವ ಸಲುವಾಗಿ ಕಂದಾಯ ಇಲಾಖೆಯ ಪ್ರಸ್ತಾವನೆಗೆ ಆರ್ಥಿಕ ಇಲಾಖೆಯು 2015–16ನೇ ಸಾಲಿನ ಲೆಕ್ಕಶೀರ್ಷಿಕೆ 5465–01–190–1–05–211–ಸಣ್ಣ ವಿಮಾನ ನಿಲ್ದಾಣಗಳ ಅಭಿವೃದ್ಧಿಯಡಿಯಲ್ಲಿ ಮಂಗಳೂರು ವಿಮಾನ ನಿಲ್ದಾಣದ ವಿಸ್ತರಣೆಗಾಗಿ ಭೂಸ್ವಾಧೀನಪಡಿಸಿರುವ ಜಮೀನಿಗೆ ಈ ಹಿಂದೆ ಅನುದಾನ ಬಿಡುಗಡೆಯಾಗಿರುವ ಲೆಕ್ಕ ಶೀರ್ಷಿಕೆಯಡಿಯಲ್ಲಿ ಹೆಚ್ಚುವರಿ ಅನುದಾನವನ್ನು ಒದಗಿಸುವ ಬಗೆಗಿನ ಪ್ರಸ್ತಾವನೆಯನ್ನು ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಯು ನೇರವಾಗಿ ಆರ್ಥಿಕ ಇಲಾಖೆಗೆ ಸಲ್ಲಿಸಿ, ಪೂರಕ ಅಂದಾಜು–2ರಲ್ಲಿ ಕ್ರಮವಹಿಸಬಹುದಾಗಿರುತ್ತದೆ ಎಂದು ಮೇಲೆ ಓದಲಾಗಿರುವ ಉಲ್ಲೇಖ (3)ರ ಅನಧಿಕೃತ ಟಿಪ್ಪಣಿಯಲ್ಲಿ ತಿಳಿಸಿರುತ್ತಾರೆ.

3. ಕಂದಾಯ ಇಲಾಖೆಯ ಕಡತದಲ್ಲಿನ ಜಿಲ್ಲಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರು ಪ್ರಸ್ತಾವನೆಯನ್ನು ಪರಿಶೀಲಿಸಿ, ಮಂಗಳೂರು ವಿಮಾನ ನಿಲ್ದಾಣದ ಅಭಿವೃದ್ಧಿಗಾಗಿ ಭೂಸ್ವಾಧೀನಪಡಿಸಿದ ಜಮೀನಿನ ನ್ಯಾಯಾಲಯದ ಪ್ರಕರಣಗಳಿಗೆ ಪರಿಹಾರ ಧನವನ್ನು ಬಿಡುಗಡೆಗೊಳಿಸುವ ಸಲುವಾಗಿ ಆರ್ಥಿಕ ಇಲಾಖೆಯ ಸೂಚನೆಯಂತೆ ಆರ್ಥಿಕ ಇಲಾಖೆಯ ಪ್ರಸ್ತಾವನೆಯ ಅನುಮೋದನೆಗಾಗಿ ಸಲ್ಲಿಸಲು ಸಣ್ಣ ವಿಮಾಣ ನಿಲ್ದಾಣಗಳ ಅಭಿವೃದ್ಧಿ ಲೆಕ್ಕ ಶೀರ್ಷಿಕೆ 5465–01–190–1–05–211ಯಲ್ಲಿ ಅನುದಾನ ಲಭ್ಯವಿಲ್ಲದಿದ್ದರಿಂದ ಈ ಕೆಳಕಂಡ ಲೆಕ್ಕ ಶೀರ್ಷಿಕೆಗಳಿಂದ ಮರುಹೊಂದಾಣಿಕೆ ಮಾಡುವಂತೆ ಪ್ರಸ್ತಾವನೆಯನ್ನು ಆರ್ಥಿಕ ಇಲಾಖೆಗೆ ಕಳುಹಿಸಲಾಗಿತ್ತು.

| Sl. No. | Head of Account | Amount (in lakhs) |
|---|---|---|
| 1 | 5465-01-190-1-22-211-Bengaluru International Convention Centre-Investment (P) | 1000.00 |
| 2 | 5465-01-190-2-06-211-Land Acquisition for Trumpet Inter Change-Investment (P) | 500.00 |
| 3 | 5465-01-190-02-07-051-Development of 408 acres of Government Land adjacent to BIAP-General Expenses (P) | 500.00 |
| 4 | 5465-01-190-3-05-211- Cost sharing for New projects-Investment (P) | 1481.96 |
| | **TOTAL** | **3481.96** |

4. ಮೇಲೆ ಓದಲಾದ ಉಲ್ಲೇಖ (4)ರಲ್ಲಿ ಆರ್ಥಿಕ ಇಲಾಖೆಯು ಮೇಲಿನ ಕ್ರಮ ಸಂಖ್ಯೆ: 1 ರಿಂದ 4ರ ಲೆಕ್ಕ ಶೀರ್ಷಿಕೆಗಳಿಂದ ಒಟ್ಟು **₹.** 3481.96 ಲಕ್ಷಗಳನ್ನು ಲೆಕ್ಕ ಶೀರ್ಷಿಕೆ 5465–01–190–1–05–211–ಸಣ್ಣ ವಿಮಾನ ನಿಲ್ದಾಣಗಳ ಅಭಿವೃದ್ಧಿ ಹೂಡಿಕೆ (ಯೋಜನೆ) ಗೆ ಮರುಹೊಂದಾಣಿಕೆ ಮಾಡಿರುವ ಬಗ್ಗೆ ಸರ್ಕಾರದ ಆದೇಶವನ್ನು ಹೊರಡಿಸಿರುವ ಹಿನ್ನೆಲೆಯಲ್ಲಿ ಮಂಗಳೂರು ವಿಮಾನ ನಿಲ್ದಾಣದ ಮೊದಲನೇ ಹಂತದ ಅಭಿವೃದ್ಧಿಗಾಗಿ ಕಂದಾಯ ಇಲಾಖೆಯು ಭೂಸ್ವಾಧೀನಪಡಿಸಿದ ಜಮೀನಿಗೆ ಸಂಬಂಧಿಸಿದಂತೆ ದಾಖಲಾಗಿರುವ ನ್ಯಾಯಾಲಯದ ಪ್ರಕರಣಗಳಲ್ಲಿ ನ್ಯಾಯಾಲಯದ ತೀರ್ಪಿನನ್ವಯ ಕಂದಾಯ ಇಲಾಖೆಯು ಪ್ರಸ್ತಾಪಿಸಿರುವಂತೆ ಹೆಚ್ಚಿನ ಪರಿಹಾರ ಬಿಡುಗಡೆ ಮಾಡುವ ಸಲುವಾಗಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಮೂಅಇ 61 ರಾಅವಿ 2014, ಬೆಂಗಳೂರು, ದಿನಾಂಕ: 14.01.2016.**

**1.** ಮೇಲಿನ ಪ್ರಸ್ತಾವನೆಯನ್ನು ಸರ್ಕಾರ ಕೂಲಂಕಷವಾಗಿ ಪರಿಶೀಲಿಸಿ ಮಂಗಳೂರು ವಿಮಾನ ನಿಲ್ದಾಣದ ಮೊದಲನೇ ಹಂತದ ಅಭಿವೃದ್ಧಿಗಾಗಿ ಕಂದಾಯ ಇಲಾಖೆಯಿಂದ ಭೂಸ್ವಾಧೀನ ಪಡಿಸಿದ ಜಮೀನಿನ ಭೂಮಾಲೀಕರಿಗೆ ನ್ಯಾಯಾಲಯದ ತೀರ್ಪಿನಂತೆ ಹೆಚ್ಚುವರಿ ಪರಿಹಾರವನ್ನು ನೀಡಲು ₹.3481.96 ಲಕ್ಷಗಳನ್ನು (ರೂಪಾಯಿ ಮೂರು ಸಾವಿರದ ನಾಲ್ಕು ನೂರು ಎಂಭತ್ತೊಂದು ಲಕ್ಷದ ತೊಂಭತ್ತಾರು ಸಾವಿರಗಳು ಮಾತ್ರ) ಈ ಕೆಳಕಂಡ ಲೆಕ್ಕ ಶೀರ್ಷಿಕೆಗಳಿಂದ ಲೆಕ್ಕ ಶೀರ್ಷಿಕೆ 5465–01–190–1–05–211–Development of Minor Airport Investment (P) ಗೆ ಮರುಹೊಂದಾಣಿಕೆ ಮಾಡಿ, ಜಿಲ್ಲಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರಿಗೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

| Sl. No. | Head of Account | Amount (in lakhs) |
|---|---|---|
| 1 | 5465-01-190-1-22-211-Bengaluru International Convention Centre-Investment (P) | 1000.00 |
| 2 | 5465-01-190-2-06-211-Land Acquisition for Trumpet Inter Change-Investment (P) | 500.00 |

| Sl. No. | Head of Account | Amount (in lakhs) |
|---|---|---|
| 3 | 5465-01-190-02-07-051-Development of 408 acres of Government Land adjacent to BIAP-General Expenses (P) | 500.00 |
| 4 | 5465-01-190-3-05-211- Cost sharing for New projects-Investment (P) | 1481.96 |
| | **TOTAL** | **3481.96** |

2. ಜಿಲ್ಲಾಧಿಕಾರಿ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರು ಈ ಅನುದಾನವನ್ನು ಸಂಬಂಧಿಸಿದ ಫಲಾನುಭವಿಗಳಿಗೆ ವಿತ್ತರಿಸಿ ಪ್ರತಿಯೊಬ್ಬರಿಗೂ ಹಣ ಬಟವಾಡೆಯಾದ ಬಗ್ಗೆ ಮಾಹಿತಿಯೊಂದಿಗೆ ಉಪಯೋಗಿತ ಪ್ರಮಾಣ ಪತ್ರವನ್ನು ಸರ್ಕಾರಕ್ಕೆ ಸಲ್ಲಿಸಲು ಸೂಚಿಸಿದೆ.

3. ಈ ವೆಚ್ಚವನ್ನು 2015–16ನೇ ಸಾಲಿನ ಲೆಕ್ಕ ಶೀರ್ಷಿಕೆ 5465–01–190–1–05–211 ಸಣ್ಣ ವಿಮಾನ ನಿಲ್ದಾಣಗಳ ಅಭಿವೃದ್ಧಿ (ಯೋಜನೆ) ಬಂಡವಾಳ ಇದರಡಿಯಲ್ಲಿ ಭರಿಸತಕ್ಕದ್ದು.

4. ಈ ಮೊತ್ತವನ್ನು ಜಿಲ್ಲಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರು ಸರ್ಕಾರದ ಅಧೀನ ಕಾರ್ಯದರ್ಶಿ, ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ ಇವರ ಮೇಲುರುಜುವಿನೊಂದಿಗೆ ಪೇಯಿಸ್ ರಶೀದಿಯ ಮುಖಾಂತರ ಜಿಲ್ಲಾ ಖಜಾನೆ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು. ಇಲ್ಲಿ, ಡ್ರಾ ಮಾಡಲು ಅಧೀಕರಿಸಿದೆ. ಜಿಲ್ಲಾಧಿಕಾರಿಗಳು ಈ ಮೊತ್ತವನ್ನು 8443 Revenue Deposit ನಲ್ಲಿ ಟಿಟಿಆರ್ ಅಡ್ಜಸ್ಟ್ ಮುಖಾಂತರ ಜಿಲ್ಲಾ ಖಜಾನೆಯಲ್ಲಿ ಠೇವಣಿ ಇಡುವುದು. ಈ ಅನುದಾನವನ್ನು ಎನ್.ಎಂ.ಸಿ. ಬೆಂಗಳೂರಿನಲ್ಲಿ, ಮಂಗಳೂರು ಜಿಲ್ಲಾಧಿಕಾರಿಗಳ ಖಾತೆಗೆ ಅಪ್‌ಲೋಡ್ ಮಾಡುವುದು.

5. ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್.ಡಿ. 74 ಬಿಆರ್‌ಎಸ್. 2015, ದಿನಾಂಕ: 08.01.2016 ಮತ್ತು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 38 ವೆಚ್ಚ–1/2015, ದಿನಾಂಕ: 08.01.2016 ರಲ್ಲಿ ರ ಟಿಪ್ಪಣಿಯಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

**PR. 92**
**SC.50**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ವೆಂಕಟೇಶ್ ಮೂರ್ತಿ ಎಂ**
ಸರ್ಕಾರದ ಅಧೀನ ಕಾರ್ಯದರ್ಶಿ
ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ.

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಕೋಲಾರ ಜಿಲ್ಲೆ, ಕೆ.ಜಿ.ಎಫ್. ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ ಮಹಾಯೋಜನೆ (ಪರಿಷ್ಕೃತ–1)ಕ್ಕೆ ತಾತ್ಕಾಲಿಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :**
1. ಆಯುಕ್ತರು, ಕೆ.ಜಿ.ಎಫ್. ನಗರಾಭಿವೃದ್ಧಿ ಪ್ರಾಧಿಕಾರ, ಕೆ.ಜಿ.ಎಫ್. ಇವರ ಪತ್ರ ಸಂಖ್ಯೆ: ಕೆ.ಜಿ.ಎಫ್. /ನಅಪ್ರಾ/ಮಯೋ/(ಪರಿಷ್ಕೃತ–1)–2031/04/2014–15/126, ದಿ: 02.09.2014 ಮತ್ತು 08.07.2015.
2. ನಗರ ಮತ್ತು ಗ್ರಾಮಾಂತರ ಯೋಜನಾ ನಿರ್ದೇಶಕರ ಏಕ ಕಡತ ಸಂಖ್ಯೆ: ನಗ್ರಾಯೋ (22)/ಬೆಂವಿ/ಕೆ.ಜಿ.ಎಫ್/ಮ.ಯೋ(ಪ–1)2014–15, ದಿ: 12.02.2015.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಪತ್ರದಲ್ಲಿ ಆಯುಕ್ತರು, ಕೆ.ಜಿ.ಎಫ್. ನಗರಾಭಿವೃದ್ಧಿ ಪ್ರಾಧಿಕಾರ ಕೆ.ಜಿ.ಎಫ್. ಇವರು ಕೆ.ಜಿ.ಎಫ್. ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆ (ಪರಿಷ್ಕೃತ–1) 2031 ನಕ್ಷೆ ಹಾಗೂ ವರದಿಯನ್ನು ತಯಾರಿಸಿ ಪ್ರಾಧಿಕಾರದ ಸಭೆಯಲ್ಲಿ ಮಂಡಿಸಿ ಶಿಫಾರಸ್ಸಿನೊಂದಿಗೆ ಸರ್ಕಾರದ ತಾತ್ಕಾಲಿಕ ಅನುಮೋದನೆಗಾಗಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಮೇಲೆ ಓದಲಾದ (2)ರ ಕಡತದಲ್ಲಿ ನಗರ ಮತ್ತು ಗ್ರಾಮಾಂತರ ಯೋಜನಾ ನಿರ್ದೇಶಕರ ಕಛೇರಿಯ ಏಕ ಕಡತದಲ್ಲಿ, ಮುಂದಿನ ಯೋಜನಾ ಅವಧಿಗೆ ಅಂದರೆ 2031ರ ವೇಳೆಗೆ ಪಟ್ಟಣದ ಜನಸಂಖ್ಯೆಯು 3,70,000 ಆಗಬಹುದೆಂದು ಅಂದಾಜಿಸಿ ಮಹಾ ಯೋಜನೆ (ಪರಿಷ್ಕೃತ–1) ತಯಾರಿಸಲಾಗಿದೆ. ಕೆ.ಜಿ.ಎಫ್. ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ 216 ಚ.ಕಿ.ಮೀ. ವಿಸ್ತೀರ್ಣದಲ್ಲಿ 4994.48 ಹೆಕ್ಟೇರ್ ಪ್ರದೇಶವನ್ನು ನಗರೀಕರಣದ ಎಲ್ಲೆಯೆಂದು ಪ್ರಸ್ತಾಪಿಸಿ ಮಹಾ ಯೋಜನಾ (ಪರಿಷ್ಕೃತ–1) ಯನ್ನು ರೂಪಿಸಲಾಗಿದೆ. ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 12ರಲ್ಲಿನ ಅಂಶಗಳನ್ನು ಪರಿಗಣಿಸಿ ಕೆ.ಜಿ.ಎಫ್. ಪಟ್ಟಣದ ಯೋಜಿತ ಬೆಳವಣಿಗಾಗಿ ಪ್ರಸ್ತಾಪಿಸಿರುವ ಪ್ರದೇಶದಲ್ಲಿ ವಸತಿಗಾಗಿ 2521.88 ಹೆಕ್ಟೇರ್ (ಶೇ.54.62), ವಾಣಿಜ್ಯಕ್ಕಾಗಿ 253.33 ಹೆಕ್ಟೇರ್ (ಶೇ.5.49), ಕೈಗಾರಿಕೆಗಾಗಿ 453.89 ಹೆಕ್ಟೇರ್ (ಶೇ. 9.83), ಸಾರ್ವಜನಿಕ/ಅರೆ ಸಾರ್ವಜನಿಕಕ್ಕೆ 226.31 ಹೆಕ್ಟೇರ್ (ಶೇ.4.91), ಉದ್ಯಾನವನ ಮತ್ತು ಬಯಲು ಜಾಗಗಳಿಗೆ 513.51 ಹೆಕ್ಟೇರ್ (ಶೇ.11.12), ಸಾರ್ವಜನಿಕ ಉಪಯುಕ್ತತೆಗಾಗಿ 38.19 ಹೆಕ್ಟೇರ್ (ಶೇ.0.83) ಹಾಗೂ ಸಾರಿಗೆ ಮತ್ತು ಸಂಪರ್ಕ ವಲಯಕ್ಕೆ 610.06 ಹೆಕ್ಟೇರ್ (ಶೇ.13.20) ಪ್ರದೇಶವನ್ನು ಕಾಯ್ದಿರಿಸಿದ್ದು, ಸದರಿ ನಗರೀಕರಣ ಪ್ರದೇಶದಲ್ಲಿ 377.31 ಹೆಕ್ಟೇರ್ ಪ್ರದೇಶವು ನೀರಿನಿಂದ ಆವೃತವಾಗಿದೆ. ಸದರಿ ಪ್ರದೇಶವನ್ನು ಭೂ ವಿಶ್ಲೇಷಣೆಯಲ್ಲಿ ಪರಿಗಣಿಸಿರುವುದಿಲ್ಲ. ಮಹಾ ಯೋಜನೆ (ಪರಿಷ್ಕೃತ–1) 2031ನ್ನು ಅನುಷ್ಠಾನಕ್ಕೆ ತರಲು ಅಗತ್ಯವಿರುವ ವಲಯ ನಿಯಮಾವಳಿಗಳನ್ನು ರೂಪಿಸಲಾಗಿದೆ. ಸದರಿ ಮಹಾ ಯೋಜನೆಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 13(1) ರನ್ವಯ ಸರ್ಕಾರದ ತಾತ್ಕಾಲಿಕ ಅನುಮೋದನೆ ನೀಡುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಕೂಲಕಂಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 217 ಬೆಂರೂಪ್ರಾ 2015, ಬೆಂಗಳೂರು, ದಿನಾಂಕ: 07.01.2016.**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕೆ.ಜಿ.ಎಫ್. ನಗರಾಭಿವೃದ್ಧಿ ಪ್ರಾಧಿಕಾರ, ಕೆ.ಜಿ.ಎಫ್. ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆ (ಪರಿಷ್ಕೃತ–1) 2031 ಕ್ಕೆ ಈ ಕೆಳಕಂಡ ಷರತ್ತಿಗೊಳಪಟ್ಟು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಾಯ್ದೆ 13(1) ರನ್ವಯ ತಾತ್ಕಾಲಿಕ ಅನುಮೋದನೆಯನ್ನು ನೀಡಲಾಗಿದೆ.

"ವಲಯ ನಿಯಮಾವಳಿಯ 'off-street parking spaces' ನಲ್ಲಿ Single family residential ಗೆ ಪ್ರತಿ 100 ಚ.ಮೀ. floor Area ಗೆ ಪಾರ್ಕಿಂಗ್ ಸ್ಪೇಸ್ ಒದಗಿಸತಕ್ಕದ್ದು"

ಮಹಾ ಯೋಜನೆ (ಪರಿಷ್ಕೃತ–1)ಗೆ, ತಾತ್ಕಾಲಿಕ ಅನುಮೋದನೆ ನೀಡಿದ ಗುರುತಾಗಿ ವರದಿ ಹಾಗೂ ನಕ್ಷೆಗಳ ಮೇಲೆ ಸರ್ಕಾರದ ಮುದ್ರೆಯನ್ನು ಹಾಕಲಾಗಿದೆ.

**PR. 93**
**SC.100**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ವಿ. ರಾಜೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ.

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಕೊಳ್ಳೇಗಾಲ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆ (ಪರಿಷ್ಕೃತ–1) ಗೆ ಸರ್ಕಾರದ ತಾತ್ಕಾಲಿಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ನಅಇ 41 ಟಿಟಿಪಿ 2000, ದಿನಾಂಕ: 24.03.2000.
2. ಪೌರಾಯುಕ್ತರು/ಸದಸ್ಯ ಕಾರ್ಯದರ್ಶಿ, ಪುರಸಭೆ ಯೋಜನಾ ಪ್ರಾಧಿಕಾರ ಇವರ ಪತ್ರ ಸಂಖ್ಯೆ: ಕೊಯೋಪ್ರಾ/ನಯೋವಿ/ಮ.ಯೋ.ಪ/1/2013–14, ದಿನಾಂಕ: 21.05.2013.
3. ನಗರ ಮತ್ತು ಗ್ರಾಮಾಂತರ ಯೋಜನಾ ನಿರ್ದೇಶಕರ ಏಕ ಕಡತ ಸಂಖ್ಯೆ: ನಗ್ರಾಯೋನಿ: ಉನಿ(ಯೋವಿ): ಮ.ಯೋ: (ಪ್ರ) (ತಾತ್ಕಾಲಿಕ): 2014–15, ದಿನಾಂಕ: 13.06.2014.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಕೊಳ್ಳೇಗಾಲ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆಗೆ ಅಂತಿಮ ಅನುಮೋದನೆ ನೀಡಲಾಗಿದೆ.

ಮೇಲೆ ಓದಲಾದ (2)ರ ಕೊಳ್ಳೇಗಾಲ ಪುರಸಭೆ ಯೋಜನಾ ಪ್ರಾಧಿಕಾರವು ಕೊಳ್ಳೇಗಾಲ ಸ್ಥಳೀಯ ಯೋಜನಾ ಪ್ರದೇಶಕ್ಕೆ ತಯಾರಿಸಿರುವ ಮಹಾ ಯೋಜನೆ (ಪರಿಷ್ಕೃತ–1) ಕುರಿತು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 13(ಡಿ) ರನ್ವಯ ನಕ್ಷೆಗಳನ್ನು ಹಾಗೂ ವರದಿಯನ್ನು ತಯಾರಿಸಿ ಸರ್ಕಾರದ ತಾತ್ಕಾಲಿಕ ಅನುಮೋದನೆ ನೀಡುವಂತೆ ಕೋರಿರುತ್ತಾರೆ.

ಮೇಲೆ ಓದಲಾದ (3)ರ ನಗರ ಮತ್ತು ಗ್ರಾಮಾಂತರ ಯೋಜನಾ ನಿರ್ದೇಶಕರ ಕಛೇರಿಯ ಕಡತದಲ್ಲಿ, ಕೊಳ್ಳೇಗಾಲ ನಗರದ ಜನಸಂಖ್ಯೆಯು 2031ರಲ್ಲಿ 85,000 ಗಳಷ್ಟು ಬೆಳವಣಿಗೆಯಾಗುವುದಾಗಿ ಅಂದಾಜಿಸಿ ಮಹಾ ಯೋಜನೆಯನ್ನು ತಯಾರಿಸಲಾಗಿದೆ. ಕೊಳ್ಳೇಗಾಲ ಸ್ಥಳೀಯ ಯೋಜನಾ ಪ್ರದೇಶದ ಒಟ್ಟು 945.70 ಹೆಕ್ಟೇರ್ ಪ್ರದೇಶವನ್ನು ನಗರದ ಅಭಿವೃದ್ಧಿಗಾಗಿ ನಗರೀಕರಣದ ಎಲ್ಲೆಯೆಂದು ಪ್ರಸ್ತಾಪಿಸಿ, ಮಹಾಯೋಜನೆ (ಪರಿಷ್ಕೃತ–1) ಯನ್ನು ರೂಪಿಸಲಾಗಿದೆ. ನಗರದ ಮುಂದಿನ ಯೋಜಿತ ಬೆಳವಣಿಗೆಗೆ ಪ್ರಸ್ತಾಪಿಸಿರುವ 945.70 ಹೆಕ್ಟೇರ್ ಪ್ರದೇಶದಲ್ಲಿ, ವಸತಿಗಾಗಿ 440.42 ಹೆಕ್ಟೇರ್ (ಶೇ.46.57), ವಾಣಿಜ್ಯಕ್ಕಾಗಿ 50.16 ಹೆಕ್ಟೇರ್ (ಶೇ.5.30), ಕೈಗಾರಿಕೆಗಾಗಿ 20.16 ಹೆಕ್ಟೇರ್, (ಶೇ.2.13), ಸಾರ್ವಜನಿಕ/ಅರೆ ಸಾರ್ವಜನಿಕ ಉಪಯೋಗಕ್ಕೆ 78.00 ಹೆಕ್ಟೇರ್, (ಶೇ.8.25) ಉದ್ಯಾನವನ ಮತ್ತು ಬಯಲು ಜಾಗಕ್ಕಾಗಿ 101.00 ಹೆಕ್ಟೇರ್ (ಶೇ.10.68) ಹಾಗೂ ಸಾರಿಗೆ/ಸಂಪರ್ಕ ವಲಯಕ್ಕೆ 238.40 ಹೆಕ್ಟೇರ್ (ಶೇ.25.21), ನಾಗರಿಕ ಸೌಲಭ್ಯಕ್ಕಾಗಿ 17.56 ಹೆಕ್ಟೇರ್ (ಶೇ.1.86) ಪ್ರದೇಶವನ್ನು ನಿಗಧಿಪಡಿಸಲಾಗಿದೆ. ಮಹಾ ಯೋಜನೆ (ಪರಿಷ್ಕೃತ–1) ಯನ್ನು ಅನುಷ್ಠಾನಕ್ಕೆ ತರಲು ಅಗತ್ಯವಿರುವ ವಲಯ ನಿಯಮಾವಳಿಗಳನ್ನು ರೂಪಿಸಲಾಗಿದ್ದು, ಸದರಿ ಮಹಾ ಯೋಜನಾ (ಪರಿಷ್ಕೃತ–1) ಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 13(1)ರನ್ವಯ **ತಾತ್ಕಾಲಿಕ ಅನುಮೋದನೆ ನೀಡಲು ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ**. ಸದರಿ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 332 ಮೈಅಪ್ರಾ 2014, ಬೆಂಗಳೂರು, ದಿನಾಂಕ: 02.11.2015.**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕೊಳ್ಳೇಗಾಲ ಸ್ಥಳೀಯ ಯೋಜನಾ ಪ್ರದೇಶಕ್ಕೆ ರೂಪಿಸಿರುವ ಮಹಾ ಯೋಜನೆ (ಪರಿಷ್ಕೃತ–1)ಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಪ್ರಕರಣ 13(1)ರನ್ವಯ ಸರ್ಕಾರದ ತಾತ್ಕಾಲಿಕವಾಗಿ ಕೆಳಕಂಡ ಷರತ್ತಿಗೊಳಪಟ್ಟು ಅನುಮೋದನೆಯನ್ನು ನೀಡಲಾಗಿದೆ.

ಮಹಾಯೋಜನೆ (ಪರಿಷ್ಕೃತ–1)ಗೆ ತಾತ್ಕಾಲಿಕ ಅನುಮೋದನೆ ನೀಡಿದ ಗುರುತಾಗಿ ವರದಿ ಹಾಗೂ ನಕ್ಷೆಗಳ ಮೇಲೆ ಸರ್ಕಾರದ ಮುದ್ರೆಯನ್ನು ಹಾಕಲಾಗಿದೆ.

**ಷರತ್ತು:**

- "Authority" means Kollegal Municipal Planning Authority.
- "High Rise Buildings" that is building with ground floors plus 4 floors and above.
- Minimum setback all round the building shall be read with Table-10.

**PR. 104**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ವಿ. ರಾಜೇಂದ್ರ,**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ (ಅಭಿವೃದ್ಧಿ ಪ್ರಾಧಿಕಾರ ಮತ್ತು ಮಂಡಳಿ)

## ಕಾರ್ಮಿಕ ಸಚಿವಾಲಯ

**ವಿಷಯ :** ಹೊಸದಾಗಿ ಪ್ರಾರಂಭವಾಗಿರುವ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳಿಗೆ ಕಟ್ಟಡ ನಿರ್ಮಾಣಕ್ಕೆ ಜಮೀನು ದಾನವಾಗಿ ನೀಡುವ ಬಗ್ಗೆ.

**ಓದಲಾಗಿದೆ :** ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ ಇವರ ಪತ್ರ ಸಂಖ್ಯೆ: ಉತನಿ/ತ/ಕಟ್ಟಡ–4/ವಿವ–01/2014–15, ದಿನಾಂಕ: 08.07.2015.

**ಪ್ರಸ್ತಾವನೆ:**

ಮೇಲೆ ಓದಲಾದ ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ ಇವರ ಪತ್ರದಲ್ಲಿ 2014–15ನೇ ಸಾಲಿನಲ್ಲಿ 100 ಹೊಸ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳನ್ನು ಪ್ರಾರಂಭಿಸಲಾಗಿದ್ದು, ಈಗಾಗಲೇ ಸದರಿ ಸಂಸ್ಥೆಗಳಲ್ಲಿ ತರಬೇತಿಯನ್ನು ಲಭ್ಯವಿರುವ ಬಾಡಿಗೆ ಕಟ್ಟಡ, ತಾತ್ಕಾಲಿಕವಾಗಿ ದೊರೆತ ಸರ್ಕಾರಿ ಕಟ್ಟಡಗಳಲ್ಲಿ ತರಬೇತಿ ನೀಡಲಾಗುತ್ತಿದೆ. ಈ ಎಲ್ಲಾ ಸಂಸ್ಥೆಗಳಿಗೆ ಸ್ವಂತ ಕಟ್ಟಡ ಹೊಂದಲು ಜಮೀನಿನ ಅವಶ್ಯಕತೆ ಇದ್ದು, ಪ್ರಸ್ತುತ 100 ಸಂಸ್ಥೆಗಳ ಪೈಕಿ 14 ಸಂಸ್ಥೆಗಳಿಗೆ ಸರ್ಕಾರಿ ಜಮೀನು ದೊರೆತಿದೆ. ಉಳಿದ ಸಂಸ್ಥೆಗಳಿಗೆ ಕಂದಾಯ ಇಲಾಖೆಯಿಂದ ಜಮೀನು ಪಡೆಯಲು ಅಗತ್ಯ ಕ್ರಮ ತೆಗೆದುಕೊಳ್ಳಲಾಗಿದೆ ಹಾಗೂ ಕೆಲವು ಸ್ಥಳಗಳಲ್ಲಿ ಸಾರ್ವಜನಿಕರು, ವಿದ್ಯಾರ್ಥಿಗಳ ಹಿತದೃಷ್ಟಿಯಿಂದ ಸಂಸ್ಥೆಗಳ ಸ್ವಂತ ಕಟ್ಟಡ ನಿರ್ಮಾಣಕ್ಕೆ ಜಮೀನನ್ನು ದಾನವಾಗಿ ನೀಡಲು ಇಚ್ಛಿಸಿದ್ದು, ಸದರಿ ದಾನವಾಗಿ ನೀಡುವ ಜಮೀನಿನಲ್ಲಿ ನಿರ್ಮಾಣಗೊಳ್ಳುವ ಕೈಗಾರಿಕಾ ತರಬೇತಿ ಸಂಸ್ಥೆಯ ಕಟ್ಟಡಕ್ಕೆ ಜಮೀನಿನ ಮಾಲೀಕರು ಇಚ್ಛಿಸುವ ಹೆಸರನ್ನು ಸಂಸ್ಥೆಗೆ ನಾಮಕರಣ ಮಾಡುವಂತೆ ಈ ಕೆಳಕಂಡ ಮನವಿಗಳನ್ನು ಸಲ್ಲಿಸಿರುತ್ತಾರೆ. ಎಂದು ತಿಳಿಸಿರುತ್ತಾರೆ.

1. ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ ಮುಧೋಳ, ಯಲಬುರ್ಗಾ ತಾಲ್ಲೂಕು, ಕೊಪ್ಪಳ ಜಿಲ್ಲೆಯ ಶ್ರೀ ಬಸಯ್ಯ ಮತ್ತು ಅಂದಯ್ಯ (ಕೋಂ ಶಿವಲಿಂಗಯ್ಯ) ಇವರ ಹೆಸರಿನಲ್ಲಿನ ಸರ್ವೆ ನಂ. 368/453/ಡಿ ಪೈಕಿ 2 ಎಕರೆ ಜಮೀನನ್ನು ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ, ಮುಧೋಳಗೆ ದಾನವಾಗಿ ನೀಡಲು ಮಾನ್ಯ ಶಾಸಕರ ನೇತೃತ್ವದಲ್ಲಿ ಒಪ್ಪಿ ₹. 100 ನ ಛಾಪ ಕಾಗದದಲ್ಲಿ ಒಪ್ಪಿಗೆ ಪತ್ರ ನೀಡಿರುತ್ತಾರೆ. ಎಂದು ತಿಳಿಸಿರುತ್ತಾರೆ.
2. ಪ್ರಾಚಾರ್ಯರು, ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ, ಮುದ್ದೇಬಿಹಾಳ ರವರು ತಮ್ಮ ಪತ್ರದಲ್ಲಿ ಶ್ರೀ ಶಾ.ಭೀರಮಲ್ ಮೀರಾಜೆ ಒಸ್ವಾಲ್, ಶಿರಾಳ, ಮುದ್ದೇಬಿಹಾಳ ಹೋಬಳಿ ವಿಜಯಪುರ ತಾಲ್ಲೂಕು, ರವರು ತಮ್ಮ ಹೆಸರಿನ ಸರ್ವೇ ನಂ. 105/1ಎ1/ಬಿ ನಲ್ಲಿರುವ 3 ಎಕರೆ 2 ಗುಂಟೆ ಜಮೀನನ್ನು ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ, ಮುದ್ದೇಬಿಹಾಳಗೆ ಉಚಿತವಾಗಿ ದಾನ ನೀಡಲು ಒಪ್ಪಿ ₹.50/– ಛಾಪ ಕಾಗದದಲ್ಲಿ ಒಪ್ಪಿಗೆ ಪತ್ರ ನೀಡಿರುತ್ತಾರೆ. ಎಂದು ತಿಳಿಸಿರುತ್ತಾರೆ.
3. ಪ್ರಾಚಾರ್ಯರು, ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ, ಹೊಳೇಹೊನ್ನೂರು ರವರು ತಮ್ಮ ಪತ್ರದಲ್ಲಿ ಬಾಲಕೃಷ್ಣ ಬಂಡಾರಿ, ಹಾಗೂ ಜಗನ್ನಾಥ ಬಂಡಾರಿಯವರು ಅಗಸನಹಳ್ಳಿ (ದಾಸರ ಕಲ್ಲಳ್ಳಿ) ಹೊಳೆಹೊನ್ನೂರು, ಭದ್ರಾವತಿ ತಾಲ್ಲೂಕು ಇವರ ಹೆಸರಿನಲ್ಲಿರುವ ಸರ್ವೇ ನಂ. 19 ರಲ್ಲಿ 3.23 ಎಕರೆ ಹಾಗೂ 1.17 ಎಕರೆ ತರೀ ಜಮೀನನ್ನು ಹೊಂದಿದ್ದು, ತಮ್ಮ ಸ್ವ ಇಚ್ಛೆಯಿಂದ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ ಹೊಳೆಹೊನ್ನೂರು ಇಲ್ಲಿನ ಸಂಸ್ಥೆಯ ಕಟ್ಟಡ ಕಟ್ಟಲು ತಮ್ಮ ಮೇಲಿನ ಸರ್ವೆ ನಂ.19ರಲ್ಲಿನ ಜಮೀನನ್ನು ದಾನವಾಗಿ ನೀಡಲು ಲಿಖಿತ ರೂಪದಲ್ಲಿ ಒಪ್ಪಿಗೆ ಪತ್ರವನ್ನು ನೀಡಿ, ತಾವು ಸೂಚಿಸುವ ಪೋಷಕರ ಹೆಸರನ್ನು ಇಡಬೇಕಾಗಿ ಕೋರಿರುತ್ತಾರೆ. ಎಂದು ತಿಳಿಸಿರುತ್ತಾರೆ.

ಈಗಾಗಲೇ ಸದರಿ ಸ್ಥಳಗಳಲ್ಲಿ ಇದುವರೆಗೆ ಸರ್ಕಾರಿ ಜಮೀನು ದೊರೆಯದೇ ಇರುವುದರಿಂದ, ತರಬೇತಿ ಹಿತದೃಷ್ಟಿಯಿಂದ ಉದ್ಯೋಗ ಮತ್ತು ತರಬೇತಿ ಇಲಾಖೆವತಿಯಿಂದ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳನ್ನು ಪ್ರಾರಂಭಿಸಿ ರಾಜ್ಯದ ಗ್ರಾಮೀಣ ಪ್ರದೇಶಗಳ ಗ್ರಾಮೀಣ ಅಭ್ಯರ್ಥಿಗಳಿಗೆ ಉದ್ಯೋಗಾವಕಾಶಗಳನ್ನು ಕಲ್ಪಿಸಲು ಸರ್ಕಾರವು ಹಲವಾರು ಕ್ರಮ ಕೈಗೊಂಡಿರುತ್ತದೆ ಹಾಗೂ ಈ ನಿಟ್ಟಿನಲ್ಲಿ ರಾಷ್ಟ್ರದಲ್ಲಿ ಅತಿ ಹೆಚ್ಚು ಕೈಗಾರಿಕಾ ತರಬೇತಿ ಸಂಸ್ಥೆಗಳನ್ನು ಹೊಂದಿರುವಂತಹ ರಾಜ್ಯಗಳಲ್ಲಿ ಕರ್ನಾಟಕವು ಮುಂಚೂಣಿಯಲ್ಲಿದೆ ಎಂಬ ಮಾಹಿತಿಯನ್ನು ತಿಳಿಸುತ್ತಾ ಮಂಜೂರಾದ ಹೊಸ ಕೈಗಾರಿಕಾ ತರಬೇತಿ ಸಂಸ್ಥೆಗಳಿಗೆ ಶೀಘ್ರವಾಗಿ ಮೂಲ ಸೌಕರ್ಯಗಳೊಂದಿಗೆ ಪ್ರಾರಂಭಿಸುವ ನಿಟ್ಟಿನಲ್ಲಿ ಗಮನಾರ್ಹವಾದ ಸಾಧನೆಗಳನ್ನು ಮಾಡಬೇಕಾಗಿರುತ್ತದೆ ಹಾಗೂ ಮೇಲಿನ ಕಾರಣಗಳ ಮೇರೆಗೆ ಮೇಲಿನ ಮೂರು ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳಿಗೆ ದಾನ ನೀಡಲು ಮುಂದೆ ಬಂದಿರುವ ದಾನಿಗಳು ಕೋರಿರುವಂತೆ ಅವರು ಸೂಚಿಸುವ ಹೆಸರನ್ನು ಕೈಗಾರಿಕಾ ತರಬೇತಿ ಸಂಸ್ಥೆಗಳಿಗೆ ಇಡುವಂತಹ ಕೋರಿಕೆಯನ್ನು ಪರಿಗಣಿಸಿ, ಕಾನೂನುತ್ಮಕ ಷರತ್ತುಗಳನ್ನು ಸೂಚಿಸಿ ಒಪ್ಪಿಗೆ ನೀಡಬಹುದೆಂದು ಅಭಿಪ್ರಾಯಪಡುತ್ತಾ, ಸರ್ಕಾರದ ಆಡಳಿತಾತ್ಮಕ ಅನುಮೋದನೆ ದೊರಕಿಸಿಕೊಡಬೇಕೆಂದು ಕೋರಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಾಇ 405 ಇಟಿಐ 2015, ಬೆಂಗಳೂರು, ದಿನಾಂಕ: 17/10/2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ ಮುಧೋಳ, ಯಲಬುರ್ಗಾ ತಾಲ್ಲೂಕು, ಕೊಪ್ಪಳ ಜಿಲ್ಲೆ, ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ, ಮುದ್ದೇಬಿಹಾಳ ಮತ್ತು ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ, ಹೊಳೇಹೊನ್ನೂರು ಸಂಸ್ಥೆಗಳಿಗೆ ದಾನಿಗಳ ಹೆಸರನ್ನು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ನಾಮಕರಣ ಮಾಡಲು ಸರ್ಕಾರದ ಮಂಜೂರಾತಿ ನೀಡಿದೆ.

**ಷರತ್ತುಗಳು:**

- ದಾನಿಗಳು ಇಷ್ಟ ಪಟ್ಟ ಹೆಸರನ್ನು ವಿದ್ಯಾ ಸಂಸ್ಥೆಗೆ ನಾಮಕರಣ ಮಾಡಲು ಕಟ್ಟಡದ ಒಟ್ಟು ಅಂದಾಜಿನ 1:3ನೇ ಭಾಗದಷ್ಟು ಅಥವಾ ಹೆಚ್ಚಿನ ಹಣ ನೀಡಿರಬೇಕು. ಇದಕ್ಕೆ ಸಂಬಂಧಿಸಿದಂತೆ ಕಟ್ಟಡ ಎಂದರೆ ಕಟ್ಟಡ ನಿರ್ಮಾಣಕ್ಕಾಗಿ ಶಾಲಾ ಕಾರ್ಯ ಚಟುವಟಿಕೆಗಳನ್ನು ನಿರ್ವಹಿಸಲು ಅನುಕೂಲವಾಗಿರುವ ಒಂದು ಪೂರ್ಣ ಹಂತವಾಗಿರುತ್ತದೆ. ಕೇವಲ ಒಂದು ಅಥವಾ ಎರಡು ಕೊಠಡಿಗಳಿಗೆ ಅನ್ವಯಿಸುವುದಿಲ್ಲ.
- ಇದಕ್ಕಿಂತ ಕಡಿಮೆ ಮೊತ್ತದ ದಾನ ನೀಡಿದ ಪಕ್ಷದಲ್ಲಿ ಆ ಮೊತ್ತದಿಂದ ಕಟ್ಟಲ್ಪಟ್ಟ ಕೊಠಡಿ, ಒಳಾಂಗಣ ಅಥವಾ ಆ ವಿಭಾಗಕ್ಕೆ ಮಾತ್ರ ಸದರಿ ದಾನಿಗಳು ಇಚ್ಛೆಪಟ್ಟ ಹೆಸರನ್ನು ನಾಮಕರಣ ಮಾಡುವ ಅವಕಾಶವಿರುವುದು.

- ದಾನಿಗಳು ನೀಡುವ ದಾನ ಜಮೀನಿನ ರೂಪದಲ್ಲಿದ್ದು, ಕ್ರೀಡಾಂಗಣಕ್ಕೆ ಉಪಯುಕ್ತವಾಗಿದ್ದರೆ, ಈ ಕ್ರೀಡಾಂಗಣಕ್ಕೆ ದಾನಿಗಳು ಸೂಚಿಸುವ ಹೆಸರನ್ನು ನಾಮಕರಣ ಮಾಡಲಾಗುವುದು.
- ಒಬ್ಬರು ಮತ್ತು ಹೆಚ್ಚಿನ ದಾನಿಗಳು ಒಂದೇ ವಿದ್ಯಾ ಸಂಸ್ಥೆಗೆ ದಾನ ನೀಡಿದಾಗ ಆ ವಿದ್ಯಾ ಸಂಸ್ಥೆಯ ಕಟ್ಟಡ ಅಥವಾ ಭೂಮಿಯನ್ನು ವಿಂಗಡಿಸಿ, ಪ್ರತಿಯೊಬ್ಬ ದಾನಿಗಳು ಸೂಚಿಸುವ ಹೆಸರನ್ನಿಡಲು ಕ್ರಮ ಜರುಗಿಸಬೇಕು.
- ದಾನಿಗಳು ನೀಡುವ ದಾನ ಹಣದ ರೂಪದಲ್ಲಿದ್ದರೆ ಹಣ ಸ್ವೀಕರಿಸಿ ಸರ್ಕಾರಿ ಖಾತೆಗೆ ಜಮಾ ಮಾಡಿಕೊಂಡ ನಂತರ ಮೇಲ್ಕಂಡ ನಿಬಂಧನೆಗೆ ಒಳಪಟ್ಟು ದಾನಿಗಳು ಇಚ್ಛಿಸಿದ ಹೆಸರನ್ನು ವಿದ್ಯಾ ಸಂಸ್ಥೆಗೆ ನಾಮಕರಣ ಮಾಡಲು ಕ್ರಮ ಜರುಗಿಸಬೇಕು.
- ದಾನಿಗಳು ನೀಡುವ ದಾನ ಆಸ್ತಿ ರೂಪದಲ್ಲಿದ್ದರೆ, ದಾನ ಸ್ವೀಕರಿಸುವ ಹಕ್ಕುಪತ್ರದ ದಾಖಲೆಗಳು ನ್ಯಾಯಬದ್ಧವಾಗಿರುವುದನ್ನು ಪರಿಶೀಲಿಸಿ ಸದರಿ ಆಸ್ತಿಯನ್ನು ಕಾನೂನು ತೊಡಕುಗಳು ಬಾರದಂತೆ ಶಾಲೆಗೆ ವರ್ಗಾಯಿಸಿಕೊಂಡ ಮೇಲೆ ತಿಳಿಸಿರುವ ನಿಬಂಧನೆಗಳನ್ನು ಪೂರೈಸಿದ ನಂತರ ವಿದ್ಯಾ ಸಂಸ್ಥೆಗೆ ದಾನಿಗಳು ಸೂಚಿಸಿದ ಹೆಸರನ್ನು ನಾಮಕರಣ ಮಾಡಲು ಕ್ರಮ ಜರುಗಿಸಬೇಕು.
- ಸ್ವೀಕರಿಸುವ ದಾನ, ವಿದ್ಯಾ ಸಂಸ್ಥೆಗೆ ದಾನಿಗಳು ಸೂಚಿಸುವ ಹೆಸರನ್ನು ನಾಮಕರಣ ಮಾಡಲು ಮಾತ್ರ ಅನ್ವಯವಾಗುತ್ತದೆ. ಸ್ವೀಕರಿಸಿದ ದಾನವನ್ನು ಯಾವುದೇ ಕಾರಣಗಳಿಂದಾಗಿ ಹಿಂತಿರುಗಿಸಲಾಗುವುದಿಲ್ಲ.

PR. 106
SC. 50

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ವಿ. ಪ್ರಕಾಶ್**
ಪೀಠಾಧಿಕಾರಿ,
ಕಾರ್ಮಿಕ ಇಲಾಖೆ. (ಉದ್ಯೋಗ ಮತ್ತು ತರಬೇತಿ)

## ಕಾರ್ಮಿಕ ಸಚಿವಾಲಯ

**ವಿಷಯ :** ಈಸ್ ಆಫ್ ಡುಯಿಂಗ್ ಬ್ಯುಸಿನೆಸ್ ಉಪಕ್ರಮದ ಅಡಿಯಲ್ಲಿ ಕಾರ್ಮಿಕ ಕಾಯ್ದೆಗಳಡಿಯಲ್ಲಿ, ಕಾರ್ಮಿಕ ಇಲಾಖೆ ಹಾಗೂ ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತಾ ಮತ್ತು ಸ್ವಾಸ್ಥ್ಯ ಇಲಾಖೆಯ ಅಧಿಕಾರಿಗಳು/ಪರಿವೀಕ್ಷಕರುಗಳು, ಕಾರ್ಖಾನೆಗಳನ್ನು ಜಂಟಿಯಾಗಿ ತಪಾಸಣೆ ನಡೆಸುವ ಬಗ್ಗೆ.

ಕರ್ನಾಟಕ ರಾಜ್ಯದಲ್ಲಿ ಕೈಗಾರಿಕಾ ಸ್ನೇಹಿ ಹಾಗೂ ಉದ್ಯೋಗಗಳ ವೃದ್ಧಿಗೆ ಪೂರಕವಾಗಿ ಈಸ್ ಆಫ್ ಡುಯಿಂಗ್ ಬ್ಯುಸಿನೆಸ್ ಉಪಕ್ರಮದ ಅಡಿಯಲ್ಲಿ ಅನೇಕ ಸುಧಾರಣಾ ಕ್ರಮಗಳನ್ನು ಜಾರಿಗೆ ತರಲಾಗಿರುತ್ತದೆ. ಈ ಹಿನ್ನೆಲೆಯಲ್ಲಿ, ರಾಜ್ಯದ ಕಾರ್ಮಿಕ ಇಲಾಖೆ ಹಾಗೂ ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತಾ ಮತ್ತು ಸ್ವಾಸ್ಥ್ಯ ಇಲಾಖೆಯ ಅಧಿಕಾರಿಗಳು/ಪರಿವೀಕ್ಷಕರುಗಳು ಜಂಟಿ ತಪಾಸಣೆ ನಡೆಸುವುದು ಕೂಡಾ ಒಂದು ಉಪಕ್ರಮವಾಗಿರುತ್ತದೆ. ಈ ಜಂಟಿ ತಪಾಸಣಾ ಪ್ರಕ್ರಿಯೆಯು ಸುಗಮವಾಗಿ ಕಾರ್ಯ ನಿರ್ವಹಿಸಲು ಕೆಳಕಂಡಂತೆ ಕ್ರಮಗಳನ್ನು ಎರಡು ಇಲಾಖೆಗಳು ಕೈಗೊಳ್ಳುವುದು;

1. ರಾಜ್ಯದಲ್ಲಿ ಸಾವಿರಾರು ಕಾರ್ಖಾನೆಗಳಿದ್ದು, ಈ ಕಾರ್ಖಾನೆಗಳಲ್ಲಿ ಕಾರ್ಮಿಕ ಕಾನೂನುಗಳ ಅನುಷ್ಠಾನದ ಹಾಗೂ ಪಾಲನೆಯ ಮಟ್ಟವನ್ನು ಪರೀಕ್ಷಿಸುವುದಕ್ಕಾಗಿ, ಸ್ವಪ್ರಮಾಣೀಕರಣಕ್ಕೆ ನೋಂದಾಯಿತವಾದ ಹಾಗೂ ಕಾರ್ಮಿಕ ಸೂಚಿ ಸಂಖ್ಯೆಯನ್ನು ಪಡೆದಿರುವ ಕಾರ್ಖಾನೆಗಳ ಜಂಟಿ ತಪಾಸಣೆ ನಡೆಸಲು, ಕಾರ್ಮಿಕ ಇಲಾಖೆ ಹಾಗೂ ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತಾ ಮತ್ತು ಸ್ವಾಸ್ಥ್ಯ ಇಲಾಖೆಗಳು ತಲಾ ಓರ್ವ "ನೋಡಲ್ ಅಧಿಕಾರಿ"ಯನ್ನು ನೇಮಿಸುವುದು. ಈ ನೋಡಲ್ ಅಧಿಕಾರಿಗಳು ಜಂಟಿ ತಪಾಸಣಾ ವ್ಯವಸ್ಥೆಯನ್ನು ಕ್ರಮಬದ್ಧವಾಗಿ ಅನುಷ್ಠಾನಗೊಳಿಸಲು ಜಂಟಿಯಾಗಿ ಕ್ರಮ ಕೈಗೊಳ್ಳುವುದು.
2. ಸದರಿ ಎರಡು ಇಲಾಖೆಗಳ ನೋಡಲ್ ಅಧಿಕಾರಿಗಳು ಜಂಟಿಯಾಗಿ ಇಲಾಖೆಗಳ ಅಧಿಕಾರಿಗಳು/ಪರಿವೀಕ್ಷಕರುಗಳು ಮುಂದಿನ ನಿಗಧಿತ ಅವಧಿಯಲ್ಲಿ ನಡೆಸಬೇಕಾದ ತಪಾಸಣೆಗಳಿಗೆ ಸಂಬಂಧಿಸಿದಂತೆ, ಅವರುಗಳ ಕಾರ್ಯಕ್ಷೇತ್ರ ಹಾಗೂ ಕಾರ್ಮಿಕ ಕಾಯ್ದೆಗಳಡಿ ನೀಡಲ್ಪಟ್ಟಿರುವ ಅಧಿಕಾರ ವ್ಯಾಪ್ತಿಗೆ ಅನುಗಣವಾಗಿ ತಪಾಸಿಸಬೇಕಾದ ಕಾರ್ಖಾನೆಗಳ ಪಟ್ಟಿಯನ್ನು ಸಿದ್ದಪಡಿಸಿ, ಅದನ್ನು ಸಂಬಂಧಿಸಿದ ಅಧಿಕಾರಿಗಳಿಗೆ/ಪರಿವೀಕ್ಷಕರುಗಳಿಗೆ ಜಂಟಿ ತಪಾಸಣೆ ಕೈಗೊಳ್ಳುವುದಕ್ಕಾಗಿ ಜಾರಿಗೊಳಿಸುವುದು.
3. ಎರಡು ಇಲಾಖೆಗಳ ನೋಡಲ್ ಅಧಿಕಾರಿಗಳು, ರಾಜ್ಯದಾದ್ಯಂತ ನಡೆಸಬೇಕಾದ ಜಂಟಿ ತಪಾಸಣೆಗಳ ಬಗ್ಗೆ ವೇಳಾಪಟ್ಟಿಯನ್ನು ಸಿದ್ದಪಡಿಸಲು ಕ್ರಮ ಕೈಗೊಳ್ಳುವುದು.
4. ನೋಡಲ್ ಅಧಿಕಾರಿಗಳು, ರಾಜ್ಯ ಮಟ್ಟದ ಕಾರ್ಯವ್ಯಾಪ್ತಿಯಿರುವ ಅಧಿಕಾರಿಗಳಿಗೆ/ಪರಿವೀಕ್ಷಕರುಗಳಿಗೆ ಪ್ರತ್ಯೇಕವಾಗಿ ಕಾರ್ಖಾನೆಗಳ ಪಟ್ಟಿಯನ್ನು ತಪಾಸಣೆ ನಡೆಸುವುದಕ್ಕಾಗಿ ಹೊರಡಿಸುವುದು.
5. ರಾಜ್ಯ ಮಟ್ಟದ ಅಧಿಕಾರಿಗಳು ಎಲ್ಲಾ ಹಂತದ ತಪಾಸಣೆಗಳ ಮೇಲ್ವಿಚಾರಣಾ ಅಧಿಕಾರವನ್ನು ಹೊಂದಿರುತ್ತಾರೆ.
6. ಕಾರ್ಮಿಕ ಇಲಾಖೆ ಹಾಗೂ ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತಾ ಮತ್ತು ಸ್ವಾಸ್ಥ್ಯ ಇಲಾಖೆಯ ಅಧಿಕಾರಿಗಳು/ಪರಿವೀಕ್ಷಕರುಗಳು ತಮ್ಮ ಅಧಿಕಾರ ವ್ಯಾಪ್ತಿಗೆ ಹಂಚಿಕೆಯಾಗಿರುವ ಕಾರ್ಮಿಕ ಕಾಯ್ದೆಗಳು, ಕಾರ್ಯಕ್ಷೇತ್ರ ಮತ್ತು ಅಧಿಸೂಚಿತಗೊಳಿಸಿದ ಅಧಿಕಾರ ವ್ಯಾಪ್ತಿಗೆ ಅನುಗುಣವಾಗಿ ತಪಾಸಣಾ ಪಟ್ಟಿಯಲ್ಲಿರುವ ಕಾರ್ಖಾನೆಗಳ ಪರಿವೀಕ್ಷಣೆಗಳನ್ನು ಜಂಟಿಯಾಗಿ ಹಾಗೂ ಸಮಗ್ರವಾಗಿ ಕೈಗೊಳ್ಳುವುದು.
7. ಕಾರ್ಮಿಕ ಇಲಾಖೆ ಹಾಗೂ ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತಾ ಮತು ಸ್ವಾಸ್ಥ್ಯ ಇಲಾಖೆಯ ಅಧಿಕಾರಿಗಳು/ಪರಿವೀಕ್ಷಕರುಗಳು ಅವರಿಗೆ ನಿಗಧಿಪಡಿಸಿರುವ ಕಾರ್ಯವ್ಯಾಪ್ತಿಯಲ್ಲಿ ಈ ಕೆಳಕಂಡ ಕಾರ್ಮಿಕ ಕಾಯ್ದೆಗಳಡಿಯಲ್ಲಿ, ಕಾರ್ಖಾನೆಗಳ ತಪಾಸಣೆಯನ್ನು ಜಂಟಿಯಾಗಿ ನಡೆಸುವುದು.

| ಕ್ರಸಂ. | ಕಾರ್ಮಿಕ ಇಲಾಖೆ |
|---|---|
| 1 | ಕೈಗಾರಿಕಾ ವಿವಾದಗಳ ಕಾಯ್ದೆ–1947 |
| 2 | ಕೈಗಾರಿಕಾ ಉದ್ಯೋಗ (ಸ್ಥಾಯಿ ಆದೇಶಗಳ) ಕಾಯ್ದೆ 1946 |
| 3 | ಕರ್ನಾಟಕ ಕೈಗಾರಿಕಾ ಸಂಸ್ಥೆಗಳ (ರಾಷ್ಟ್ರೀಯ ಮತ್ತು ಹಬ್ಬದ ರಜಾದಿನಗಳ) ಕಾಯ್ದೆ–1963 |

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



| ಕ್ರ.ಸಂ. | ಕಾರ್ಮಿಕ ಇಲಾಖೆ |
|---|---|
| 4 | ಬಾಲ ಕಾರ್ಮಿಕ (ನಿಷೇಧ ಮತ್ತು ನಿಯಂತ್ರಣ) ಕಾಯ್ದೆ–1986 |
| 5 | ಗುತ್ತಿಗೆ ಕಾರ್ಮಿಕ (ನಿಷೇಧ ಮತ್ತು ನಿಯಂತ್ರಣ) ಕಾಯ್ದೆ–1970 |
| 6 | ಅಂತರರಾಜ್ಯ ವಲಸೆ ಕಾರ್ಮಿಕರ (ಉದ್ಯೋಗ ಕ್ರಮೀಕರಣ ಮತ್ತು ಸೇವಾ ಷರತ್ತುಗಳ) ಕಾಯ್ದೆ 1979 |
| 7 | ಕನಿಷ್ಟ ವೇತನ ಕಾಯ್ದೆ–1948 |
| 8 | ಬೋನಸ್ ಪಾವತಿ ಕಾಯ್ದೆ–196 |
| 9 | ಸಮಾನ ವೇತನ ಕಾಯ್ದೆ–1976 |
| 10 | ಉಪಧನ ಪಾವತಿ ಕಾಯ್ದೆ–1972 |
| 11 | ಕರ್ನಾಟಕ ಕಾರ್ಮಿಕ ಕಲ್ಯಾಣ ನಿಧಿ ಕಾಯೆ–1965 |
| 12 | ಉದ್ಯೋಗ ಸ್ಥಳದಲ್ಲಿ ಮಹಿಳೆಯರಿಗೆ ಲೈಂಗಿಕ ಕಿರುಕುಳ (ತಡೆಯುವಿಕೆ, ನಿಷೇಧ ಹಾಗೂ ಪುನರ್ವಸತಿ) ಕಾಯ್ದೆ–2013 |
| **ಕ್ರ.ಸಂ.** | **ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತಾ ಮತ್ತು ಸ್ವಾಸ್ಥ್ಯ ಇಲಾಖೆ** |
| 1 | ಕಾರ್ಖಾನೆಗಳ ಕಾಯ್ದೆ–1948 |
| 2 | ವೇತನ ಪಾವತಿ ಕಾಯ್ದೆ–1936 |
| 3 | ಹೆರಿಗೆ ಭತ್ಯೆ ಕಾಯ್ದೆ–1961 |
| 4 | ಬಾಲ ಕಾರ್ಮಿಕ (ನಿಷೇಧ ಮತ್ತು ನಿಯಂತ್ರಣ) ಕಾಯ್ದೆ–1986 |
| 5 | ಬಾಯ್ಲರುಗಳ ಕಾಯ್ದೆ–1923 |

ವಿಶೇಷ ಸಂದರ್ಭಗಳಲ್ಲಿ ಸರ್ಕಾರವು ಸಾರ್ವಜನಿಕ ಹಿತದೃಷ್ಠಿಯಿಂದ ಕೊಡುವ ಸೂಚನೆಗಳನ್ನು ಹೊರತುಪಡಿಸಿ, ಮೇಲ್ಕಂಡ ಕ್ರಮಗಳನ್ನು ಸಂಬಂಧಿಸಿದ ಅಧಿಕಾರಿಗಳು/ಪರಿವೀಕ್ಷಕರುಗಳು ಕೈಗೊಳ್ಳುವುದು.

ಈ ಕುರಿತು ಪ್ರಗತಿ ವರದಿಯನ್ನು ಸರ್ಕಾರಕ್ಕೆ ಪ್ರತಿ ಮೂರು ತಿಂಗಳಿಗೊಮ್ಮೆ ನೋಡಲ್ ಅಧಿಕಾರಿಗಳು ಜಂಟಿಯಾಗಿ ಇಲಾಖಾ ಮುಖ್ಯಸ್ಥರ ಮೂಲಕ ಸಲ್ಲಿಸುವುದು.

**PR. 149**

**SC.50**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜಿ. ಎಂ. ಸಿದ್ಧರಾಜು**
ಸರ್ಕಾರದ ಅಧೀನ ಕಾರ್ಯದರ್ಶಿ
ಕಾರ್ಮಿಕ ಇಲಾಖೆ. (ಕಾರ್ಖಾನೆ ಮತ್ತು ಬಾಯ್ಲರುಗಳು)

ಮುದ್ರಕರು ಹಾಗೂ ಪ್ರಕಾಶಕರು:– ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59